ಶ್ರೀ

# ಉತ್ತರರಾಮಚರಿತ್ರ.

## ಪ್ರಥಮಾಂಕಂ.

ಸೂತ್ರಧಾರ— ವೃ|| ವಾಮಾಂಕಸ್ಥಿತಶೈಲರಾಜತನಯಾ ಕರ್ಣಾವತಂಸೋ
ತ್ಪಲಂ | ಶ್ಯಾಮಂ ವಾರ್ಶ್ವೋಗಳದಂತಕೋರಕಕರೇಕಂಬುಗ್ರೀವದೋಳ್ಳ್
ಪ್ಪರ | ಶ್ಯಾಮಮಹಾತ್ಮ್ಯಮನಪ್ಪುಗ್ರೈದ ಕರುಣಾವಾರಾಕರಂ ಶ್ರೀಧರ
ಧಾಮಂ | ರಕ್ಷಿಕೆ ಚಾಮಭೂಮಿಪತಿಯಂ ಶ್ರೀಕಂಧರಂ ಶಂಕರಂ ||೧||
ಎಲೇ ಸರಸರೂ ವಿದರಾದ ಸಭಾಸದರೆ ಎನ್ನ ವಿಜ್ಞಾಪನೆಯಲ್ಲಿ
ಚಿತ್ತವಿಡಬೇಕು.

ಕಂ|| ವರವಾಗ್ದೇವತೆಯುವರಂ |
ಕರಿಸಿದ ಭವಭೂತಿಯಿಂದೆ ವಿರಚಿತವಾದು ||
ತ್ತರರಾಮಚರಿತ್ರವನ |
ಚ್ಛರಿಮಿಗೆ ಕರ್ಣಾಟಭಾಷೆಯಿಂದಾಡಿಸುವೆಂ ||೧||

---

ರಾಗ || ಯಮುನಾ || ಆದಿತಾಳ ||

ಅಮರೀಕಬರೀಭ್ರಮರೀ | ರಮಣೀಯಾಂಘ್ರಿಪದ್ಮೆ || ಪ || ಗೌರೀಕೌಸೋದರಿ |
ಮಾರಾರಿಸುಂದರಿ | ತಾರಹಾರಬಿಂಬಾಧರಿ | ಕುಮಾರಿ || ೧ || ನತಲೋಕಕಾ
ಮಿತ | ನಂದನವಲ್ಲರೀ | ಕುಶಿರೋಮಣಿವನಮಯೂರಿ || ೨ || ತ್ರಿಪುರಸಾಂಬಿಕೆ |

ಸಮಕಾಲಿಕನಾಗಿಯೂ ಇದೆನು. (ಎಲ್ಲಾ ಕಡೆಯಲ್ಲಿಯೂ ನೋಡಿ)

ಓಹೋ! ಪೌಲಸ್ತ್ಯಕುಲ ಧೂಮಕೇತುವಾದ ಮಹಾರಾಜ ರಾಮನ ಈ ಅಭಿಷೇಕಸಮಯವು ದೂರವಾಗಲೂ ಅವಿಚ್ಛಿನ್ನವಾಗಿ ಮೊಳಗುವ ಮಂಗಳವಾದ್ಯಗಳಿಂದ ಮೆರೆಯುತ್ತಿತ್ತು. ಅದೇತಕ್ಕೀಗ ರಾಜಬೀದಿಗಳಲ್ಲಿ ನಟರು ಗೀತವಾದ್ಯನೃತ್ಯಗಳನ್ನು ಬಿಟ್ಟು ಸುಮ್ಮನಿರುವರು.

(ನಟಿ ಪ್ರವೇಶಿಸಿ)

ನಟಿ–ಎಲೈ ಆರ್ಯನೆ ಮಹಾರಾಜನಾದ ರಾಮನು ತನ್ನನ್ನು ಅಭಿನಂದಿಸುವದಕ್ಕೆ ಬಂದ ಲಂಕಾಸಮರ ಸಹಾಯಿಗಳಾದ ಸುಗ್ರೀವ ವಿಭೀಷಣ ಪ್ರಮುಖರನ್ನು ಮತ್ತು ದಿಗಂತಪಾವನರಾದ ಬ್ರಹ್ಮರ್ಷಿ ರಾಜರ್ಷಿಗಳನ್ನು ತಮ್ಮತಮ್ಮ ಮನೆಗಳಿಗೆ ಕಳುಹಿಸಿದನು. ಅವರುಗಳನ್ನು ಆರಾಧಿಸುವುದಕ್ಕಾಗಿ ಇದುವರೆಗು ಮಹೋತ್ಸವ ಬೆಳೆಯಿತು. ಈಗಲಾದರೋ!

ಕಂ|| ರಾಮನಮಾತ್ಯಗಳೊಲವಿಂ |
ಜಾಮಾತೃವಿನಾಶ್ರಮಕ್ಕರುಂಧತಿಯುಂ ತಾಂ ||
ಪ್ರೇಮದಿಕೂಡಿ ವಸಿಷ್ಠನು |
ಹಾಮುನಿಯಾರ್ಕ್ಯಕೆಯಿಂದವರ್ಗೋರಮುಟ್ಟಿರ್ ||೨||

ಸೂತ್ರ–ಭಾವನೆ ನಾನು ವಿದೇಶಿಯನಾದ ಕಾರಣ ಕೇಳುವೆನು, ಜಾಮಾತೃವೆಂಬುವನು ಯಾರು.

ನಟಿ–ಕೇಳು [illegible]

ರಾಜನು ದತ್ತಳನ್ನುಮಾಡಿಕೊಂಡು ವಿಭಾಂಡಕಪುತ್ರನಾದ ಋಷ್ಯ
ಶೃಂಗನಿಗೆ ಮದುವೆಮಾಡಿಕೊಟ್ಟನು ; ಆತನು ದ್ವಾದಶ ವಾರ್ಷಿಕ
ವಾದ ಯಜ್ಞವನ್ನು ಆರಂಭಿಸಿರುವನು. ಆತನ ನಿರ್ಬಂಧಕ್ಕಾಗಿ
ಪೂರ್ಣಗರ್ಭಿಣಿಯಾದ ಜಾನಕಿಯನ್ನು ಬಿಟ್ಟು ಗುರುಜನಗಳೆಲ್ಲರು
ಅಲ್ಲಿಗೆ ಹೋದರು ;

ಸೂತ್ರ—ಈವಿಚಾರದಿಂದ ನಮಗೇನು, ನಡೆ ನಮ್ಮ ನಮ್ಮ ಜಾತಿ ಪದ್ಧತಿ
ಪ್ರಕಾರ ರಾಜದ್ವಾರವನ್ನು ಪ್ರವೇಶಿಸೋಣ.

ನಟಿ—ಹಾಗಾದರೆ ರಾಜೋಪಸರ್ಪಣಸಮಯದಲ್ಲಿ ಮಾಡತಕ್ಕ ಸ್ತೋತ್ರ
ಪದ್ಧತಿಯನ್ನು ಭಾವನೆ ನಿರೂಪಿಸಬೇಕು.

ಸೂತ್ರ—ಕಂ|| ಅಳುಕದವರಾಳ್ವುದು ಮಾಳ್ಪುದ |
ಪಳಬಾರದೆಬಿಡದುಕುಜನರೆಂತಿದಿರ್ಗಾಣವೆ
ಲಲನೆಯರನಡೆಯೊಳಂ ಕವಿ |
ಗಳ ನುಡಿಯೊಳಮಿರದ ಕುಂದನುಡಿದಪರಲ್ತೇ ||೩||

ನಟಿ—ಅವರನ್ನು ಅತಿ ಕುಜನರೆಂದು ಹೇಳಬೇಕು. ಏತಕ್ಕೆಂದರೆ.

ಕಂ|| ಕಿಚ್ಚಿಂ ಪ್ರೋಕ್ಷಿತೆಂದೊಡ |
ಮುಚ್ಚಿರಿರಕ್ಕಸನ ಮನೆಯೊಳಿರ್ದುದೆ ನೆನವಾ ||
ಗುಚ್ಚರಿಸುವರಪವಾದವ |
ಸಚ್ಚರಿತೆಯುಮಾದ ಜನಕಸುತೆಯೊಳ್ ಕುಜನರ್ ||೪||

ಸೂತ್ರ—ಈಜನವಾರ್ತೆ ಏನಾದರೂ ಮಹಾರಾಜನ ಕಿವಿಗೆ ಮುಟ್ಟಿದರೆ
ಕಷ್ಟ

ನಟಿ—ಸರ್ವಪ್ರಕಾರದಿಂದಲೂ ಋಷಿಗಳೂ ದೇವತೆಗಳೂ ಮಂಗಳವನ್ನುಂ

ಸೀತೆ—ಇದಕ್ಕೆ ಸಾವಕಾಶವೇನು.

ರಾಮ—ಶೀಘ್ರವಾಗಿ ಕರೆದುಕೊಂಡುಬಾ.

(ಕಂಚುಕಿ ಹೋದನು)

(ಅಷ್ಟಾವಕ್ರರು ಬರುವರು).

ಅಷ್ಟಾ—ನಿಮಗೆ ಮಂಗಳವಾಗಲಿ.

ರಾಮ—ಇದೋ ನಮಸ್ಕರಿಸುವೆನು. ಇಲ್ಲಿ ಕುಳಿತುಕೊಳ್ಳಬೇಕು.

ಸೀತೆ—ನಿಮಗೆ ವಂದಿಸುವೆನು. ಸಕಲರಾದ ನನ್ನ ಗುರುಜನಗಳಿಗೂ ಶಾಂತಾದೇವಿಗೂ ಕ್ಷೇಮವೆ ?

ರಾಮ—ಪೂಜ್ಯರಾದ [illegible]ಶೃಂಗರೂ ಆರ್ಯೆಯಾದ ಶಾಂತಾದೇವಿಯೂ ಕೂಡ ನಿರ್ವಿಘ್ನವಾಗಿ ಸೋಮಯಾಗವನ್ನು ನೆರವೇರಿಸಿದರೆ.

ಸೀತೆ—ನಮ್ಮನ್ನೇನಾದರೂ ಸ್ಮರಿಸುವರೊ.

ಅಷ್ಟಾ—(ಕುಳಿತು) ನಿಮ್ಮ ಸ್ಮೃತಿಯಲ್ಲೇ ಇರುವರು. ಎಲೌ ದೇವಿಯೇ ಪೂಜ್ಯರಾದ ವಸಿಷ್ಠರು ನಿನ್ನನ್ನು ಕುರಿತು ಹೀಗೆ ಹೇಳುತ್ತಾರೆ"

ಕಂ|| ಪಡೆದಾತಂ ಜನಕಂ ಕೈ |
ಪಿಡಿದಾತಂ ರವಿಕುಲಾಬ್ಧಿಸೋಮಂ ರಾಮಂ ||
ನುಡಿದಪೆನಿನಗೇಂ ಪರಕೆಯ |
ಪೊಡವಿಯಸುತೆ ವೀರಮಾತೆ ಯೆನಿಸುತೆಬಾಳೌ ||೬||

ರಾಮ—ಅನುಗೃಹೀತರಾದೆವು.

ಕಂ|| ಆಗುವರನೋಡಿ ಲೌಕಿಕ |
ಯೋಗಿಗಳಾಶೀರ್ವದಿಸುವ ರಾದ್ಯರೆನಿಪ್ಪ ||
ಯೋಗೀಶ್ವರರಾಶಿಷದಿಂ |
ದಾಗದರಾಗಮದ ನುಡಿಯೊಡನೇಂ ಪೊಗಳ್ವಂ ||೭||

ಲಕ್ಷ್ಮಣ—ಇದೇ ಚಿತ್ರಪಟವು"

ಸೀತೆ—(ಚೆನ್ನಾಗಿ ನೋಡಿ) ಇವರ್‍ಯಾರು. ಮೇಲೆನಿಂತು ಆರ್ಯಪುತ್ರನನ್ನು ಸ್ತುತಿಸುತ್ತಿರುವರು"

ಲಕ್ಷ್ಮಣ—ಇವು ಜೃಂಭಕಾದಿ ಮಂತ್ರಾಸ್ತ್ರಗಳು. ಕೃಶಾಶ್ವನ ದೆಸೆಯಿಂದ ವಿಶ್ವಾಮಿತ್ರರಿಗೆ ಬಂದು ಅನಂತರ ತಾಟಕಾ ವಧೆಯಲ್ಲಿ ಅವರಿಂದ ಆರ್ಯನಿಗೆ ಕೊಡಲ್ಪಟ್ಟಿರುವವು"

ರಾಮ—ದೇವಿ ಈ ದಿವ್ಯಾಸ್ತ್ರಗಳನ್ನು ವಂದಿಸು,

ರಾಮ—ಸರ್ವಪ್ರಕಾರದಿಂದಲು ಈಗ ನಿನ್ನ ಗರ್ಭವನ್ನು ಸೇರುತ್ತಿರುವವು.

ಸೀತೆ—ಅನುಗ್ರಹಿಸಲ್ಪಟ್ಟೆನು.

ಲಕ್ಷ್ಮಣ—ಇದೋ ಇದು ಮಿಥಿಲಾ ವೃತ್ತಾಂತವು.

ಸೀತೆ—ಆರ್ಯಪುತ್ರನ ಅನುಭವಮಾನವಾದ ಆಕೃತಿಯು, ಇಲ್ಲಿ ಸರಿಯಾಗಿ ಬರೆಯಲ್ಪಟ್ಟಿರುವುದು.

ಲಕ್ಷ್ಮಣ—ಆರ್ಯನೆ ನೋಡು ನೋಡು.

ಕಂ|| ಅನುಬಂಧಿಗಳಾದಮಹಾ |
ಮುನಿ ಮೈತ್ರಾವರುಣ ಮುಖ್ಯರಂಪೂಜಿಸುವಂ ||
ಜನನಿಜಜನಕಗುಂಮೆ [illegible]
ಜನಕರಸತ್ಕುಲಪುರೋಹಿತಂ ಗೌತಮನುಂ ||೯||

ರಾಮ—ಇದೀಗ ನೋಡತಕ್ಕದ್ದು.

ಕಂ|| ಜನಕರಘುಕ್ಷಿತಿನಾಯಕ |
ರ [illegible] ಂ ಕೊಡುವವನುಂ ||
ಇನಿಮಳಕೊಂಬುವನುಂ |
ತಾನೆಸಲೆ ವಿಶ [illegible] ವಿಶ್ವಾಮಿತ್ರ [illegible]

ಸೀತೆ—ಇವರಲ್ಲವೆ ಪಾಣಿಗ್ರಹಣಕ್ಕೆ ಪೂರ್ವದಲ್ಲಿ ಗೋದಾನಮಂಗಳ
ವನ್ನು ಮಾಡಿ ವಿವಾಹ ದೀಕ್ಷೆಯನ್ನು ಧರಿಸಿದ ನೀವು ನಾಲ್ವರು
ಭ್ರಾತೃಗಳು. ಅದೇ ಪ್ರದೇಶದಲ್ಲಿ ಅದೇ ಸಮಯದಲ್ಲಿರುವೆನೆಂದು
ಭಾವಿಸುವೆನು.

ರಾಮ—ಇದು ಆ ವಿವಾಹಕಾಲದ ಹಾಗೆಯೇ ಇದೆ ನೋಡು. ಯಾವವಿ
ವಾಹಕಾಲದಲ್ಲಿ,

ಕಂ|| ಸುಮುಖಿ ಧೃತಕಂಕಣಂ ಗೌ |
ತಮಾರ್ಪಿತಂ ಮೂರ್ತಿವೆತ್ತ ಸುಮಹೋತ್ಸವದೊಳ್ ||
ರಮಣೀಯವಾದ ತವಕರ |
ಕಮಲಂತಾನಿತ್ತುದೆನಗೆ ಬಲುಸಂತಸಮಂ ||

ಲಕ್ಷ್ಮಣ—ಇವರು ನೀವು. ಇವರಿಬ್ಬರು ಮಾಂಡವೀ ಶ್ರುತಕೀರ್ತಿಯರು.

ಸೀತೆ—ಎಲೈ ವತ್ಸನೆ ಇನ್ನೊಬ್ಬಳಿರುವಳಲ್ಲಾ ಈಕೆ ಯಾರು.

ಲಕ್ಷ್ಮಣ—(ಲಜ್ಜೆಯಿಂದ ನಕ್ಕು) (ಸ್ವ) ಓಹೋ ಆರ್ಯೆಯು ನನ್ನ
ಹೆಂಡತಿಯ ಹೆಸರನ್ನು ಕೇಳುವಳು ಒಳ್ಳೇದು (ಇನ್ನೊಂದು ಕಡೆ
ತೋರಿಸಿ) ಆರ್ಯೆ ಈತನು ಪೂಜ್ಯನಾದ ಪರಶುರಾಮನು.

ಸೀತೆ—ಈತನನ್ನು ನೋಡುವುದಕ್ಕೆ ನನಗೆ ಭಯವಾಗುವುದು.

ರಾಮ—ಎಲೈ ಮಹರ್ಷಿಯೆ ನಿನಗೆ ವಂದಿಸುವೆನು.

ಲಕ್ಷ್ಮಣ—ಆರ್ಯನೆ ನೋಡು ನೋಡು. ಈತನು ನಿನ್ನಿಂದ (ಎನ್ನುವಷ್ಟರಲ್ಲೆ)

ರಾಮ—ವತ್ಸನೆ ಅದುಹಾಗಿರಲಿ ಇನ್ನೂ ನೋಡತಕ್ಕದ್ದು ಬಹಳವಾಗಿರು
ವುದು. ಇನ್ನೊಂದು ಕಡೆ ತೋರಿಸು.

ಸೀತೆ—(ಸ್ನೇಹ ಬಹುಮಾನಗಳಿಂದ ಕೂಡಿ) ಆರ್ಯಪುತ್ರನೆ ನೀನು ವಿನಯ
ಸಂಪತ್ತಿನಿಂದ ಚನ್ನಾಗಿ ಶೋಭಿಸುವೆ.

ರಾಮ—(ಕಣ್ಣೀರಿಂದ ಕೂಡಿ) ಆಃ ನೆನೆಕೊಳ್ಳುವೆನು ಆಕಾಲದಲ್ಲಿಯೂ ಜಾನಕಿಯೂ ಕೂಡ

ಕಂ|| ಶಿಶುತನ[illegible]ಸ್ಸಲ |
ದಶನಗಳಿಂ ವಿರಳವಿರಳವಾದಳಕಗಳಿಂ ||
ಶಶಿಕರಮನೋಜ್ಞವಿಭ್ರಮ |
ವಿಶೇಷದಿಂದೆನ್ನ ಜನನಿಯುಗೊಲವಿತ್ತಳ್ ||

ಲಕ್ಷ್ಮಣ—ಇದೋ ಇವಳು ಮಂಥರೆ.

ರಾಮ—(ಮೌನದಿಂದ ಮತ್ತೊಂದು ಕಡೆಗೆ ತಿರುಗಿ) ಎಲೆ ಜಾನಕಿ ಇದೇ ಆ ಇಂಗುದೀ ವೃಕ್ಷವು ಇಲ್ಲೇ ನಮಗೂ ಆ ಗುಹನಿಗೂ ಮೈತ್ರಿಯುಂಟಾದದ್ದು.

ಲಕ್ಷ್ಮಣ—(ಸ್ವಗತ ನಕ್ಕು) ಓಹೋ ಆರ್ಯಪುತ್ರನು ಚಿಕ್ಕಮ್ಮನ ವೃತ್ತಾಂತವನ್ನು ಮರೆಸಿದನು.

ಸೀತೆ—ಆಃ ಇದೋ ನೀವು ಜಡೆಗಳನ್ನು ವಹಿಸಿದ ವೃತ್ತಾಂತವು.

ಲಕ್ಷ್ಮಣ—ಕಂ|| ಮುಪ್ಪಿನೊಳು ಸುತರ್ಗೆ ರಾಜ್ಯವ |
ನೊಪ್ಪಿಸಿ ರಘುಕುಲಜರಾಂವನವರ್ತನಮಂ ||
ಬೆಪ್ಪನಸತ್ಯಕೆಬಾಳ್ವುದೊ |
ಳಿಪ್ಪಾಗಳ್ ತಳೆದನಾರ್ಯನಮದಮಚರ್ಯಂ ||

ಸೀತೆ—ಇದೋ ಪಾವನೆಯಾದ ಭಾಗೀರಥಿಯು.

* ರಾಮ—ಪೂಜ್ಯಳಾದ ರಘುಕುಲದೇವತೆಯೆ ನಿನಗೆ ವಂದಿಸುವೆನು.

---

* ರಾಗ || ಬಿಲಾಬ್' || ಆದಿ ||

ಭಾಗೀರಥೀ ಮಹಾಭಾಗೆ ವಂದಿಪೆನಾಂ | ನಾಗಭೂಷಣಶಿರೋಭಾಗವಿಭೂಷೆ || ಪ || ಕಪಿಲಕೋಪಾಗ್ನಿಯಿಂ | ತಪಿಸಿದನಮ್ಮಯ | ಪ್ರಪಿತಾಮಹರನು | ಕೃಪೆಯೊಳುದ್ಧರಿಪ ||೧|| ಅಭಿವಂದಕಜನ | ಕಭಿಮತವನೀಸುವ | ಶುಭಫಲವೀಯುವ|

ಲಕ್ಷ್ಮಣ—ಇದು ಭರದ್ವಾಜರು ತೋರಿಸಿದ ಶ್ಯಾಮನಾಮಕವಾದ ಕಾಳಿಂ
ದೀ ತಟದ ವಟವೃಕ್ಷವು.

ಸೀತೆ—ಆರ್ಯಪುತ್ರನೆ ಈ ಪ್ರದೇಶವನ್ನು ಸ್ಮರಿಸುವೆಯಾ .

‡ ರಾಮ—

ಲಕ್ಷ್ಮಣ—ಇದು ವಿಂಧ್ಯಾಟವಿಯು ಇಲ್ಲಿಯೆ ಆ ವಿರಾಧನು ಬಂದು ತಡೆ
ದದ್ದು. (ಇನ್ನೊಂದು ಕಡೆ ತೋರಿಸಿ) ಇದು ಗೋದಾವರೀ
ತೀರದಲ್ಲಿರುವ ಪ್ರಸ್ರವಣ ಪರ್ವತವು.

*ರಾಮ—

ಲಕ್ಷ್ಮಣ—ಇದೋ ಪಂಚವಟಿಯಲ್ಲಿ ಸಂಘಟಿಸಿದ ಶೂರ್ಪಣಖಿಯು.

ಸೀತೆ—ಹಾ ಆರ್ಯಪುತ್ರನೆ ಇಲ್ಲಿನವರೆಗೆ ನಿನ್ನ ದರ್ಶನ.

ರಾಮ—ಎಲೆ ಭೀರುವೆ ಇದು ಚಿತ್ರವಲ್ಲವೆ.

ಸೀತೆ—ಚಿತ್ರದಲ್ಲಿದ್ದರು ದುರ್ಜನರು ದುಃಖವನ್ನುಂಟುಮಾಡುವರು.

---

‡ ರಾಗ ॥ ಪೂರ್ವಿ ॥ ಆದಿ ॥

ಮರೆವೆನೆಂತಿದಕಾಂತೆ । ಮನದಿನಾಂ ॥ ಪ ॥ ಪರಿಪರಿಯಿಂದುಪಚರಿಸಿದಪರಿಯ
ನಾಂ ॥ ಅ ॥ ಪ ॥ ಪಡೆದುಜಾಲಸ್ಯದ । ಪಡೆದನಿನ್ನಂಗದ । ಕಡುಹಿತವಾನು
ಪೇಳ್ದ । ಬಿಡದೊತ್ತಿದುದನ್ನುನಾಂ ॥ ೧ ॥ ಸ್ವಪದೆಜಾಡದ । ಗಾಸಿ[illegible]ದನೀಂ ।
ವಾಸದ[illegible]ದಿಯುನಾಂ ॥ ೨ ॥ ಬಳಲಿದದೇಹದ । ಅಲಸಿದೊಡೆ
ನೈದೆ । ದೊಳಗೊರಗಿನೀ । ಮಲಗಿದರೀತಿಯ ॥ ೩ ॥

---

* ರಾಗ ॥ ಬೇಹಾಗ್ ॥ ಆದಿ ॥

ಸ್ಮರಿಸುವೆಯಾ ಸರಸೀರುಹಮುಖಿಯಾ । ಗಿರಿಯೊಳಗಿನಾಂ ಪೊಂದಿದ ದರ್ಶನವನು ॥ ಪ ॥
ಕಂಡನೇ ಲಕ್ಷ್ಮಣ । ನಿಂದುತಂದಿತ್ತ ಕಂದಮೂಲಫಲಗಳ ಸವಿದು । ಚಂದದೊ
ಳೀ ಪರ್ಣಮಂದಿರದೊಳಗಾ । ವೆಂದದೊಳೆ ದರ್ಶಿನಂಗಳನು ॥ ೧ ॥ ತಾವರೆ ಸ್ಮರಿ
ಲೆ । ಪೂವಿನವಾಸನೆ । ತೀವಿದನೀರಿಂ ಶೋಭಿಸುವ । ಪಾವನಗೋದಾವರೀತೀರದ ।
ನಾವನುಭವಿಸಿದಾನಂದಗಳನು ॥ ೨ ॥ ಬಿರಿಸೆಳದಷ್ಕೃತೆ । ಚಿರದೊಳಪೋಲಗ ।
[illegible]

‡ ಲಕ್ಷ್ಮಣ—ಆಃ ಜನಸ್ಥಾನದ ವೃತ್ತಾಂತವು ಈಗ ನಡೆದಹಾಗೆ ಕಾಣು ವುದಲ್ಲ.

ಸೀತೆ—(ದುಃಖದಿಂದ) ಆರ್ಯಪುತ್ರನೆ ನನಗಾಗಿ ಬಹಳ ಕಷ್ಟಪಟ್ಟೆಯ.

ಲಕ್ಷ್ಮಣ—(ರಾಮನನ್ನು ನೋಡಿ) ಆರ್ಯನೆ ಇದೇನು.

ಕಂ॥ ಕಿತ್ತಸರದಿಂದಲುಳಿರುವ ।
ಮುತ್ತಿನಮಣಿಯಂತೆ ತೋರ್ಪ ಕಂಬನಿ ಜಲನಂ ॥
ಚಿತ್ತಹನಾಸಾಧರಗಳು ।
ಮೊತ್ತರಿಸಿದ ನಿನ್ನ ದುಃಖಮಂಸೂಚಿಸುಗುಂ ॥

ರಾಮ—ಎಲೈ ವತ್ಸ—ಕಂ॥ ಆಗಳ್ಸೈಸಿದೆನಸಿಯ್ಯೆ ।
ಯೋಗವ್ಯಾಕುಲವ ಬಿಡಿಸಿತರ್ಪಾಸೆಯೊಳಾಂ ॥
ಈಗಳದುಮನಗಿಮನದೊಳ ।
ಗಾಸಿಸುವದು ನೋವಹೃದಯಮರ್ಮವ್ರಣದೋಲ್ ॥

ಸೀತೆ—ಅಹಾ ನಾನುಕೂಡ ಈ ಶೋಕದಿಂದಲೆ ಆರ್ಯಪುತ್ರನು ಅಗಲಿದಂತ ಭಾವಿಸುವೆನು.

ಲಕ್ಷ್ಮಣ—ಓಹೋ ಇವರ ದುಃಖವು ಮಿತಿಮೀರಿತು. ಇನ್ನೊಂದು ಕಡೆ ತೋರಿಸುವೆನು. (ತೋರಿಸಿ) ಇವನು ಕಲ್ಪಾಂತರಗಳನ್ನು ಕಂಡ ಗೃಧ್ರರಾಜನಾದ ಜಟಾಯುವು.

ಸೀತೆ—ಹಾ ತಂದೆ ಮಗಳ ಕಂಡಂತೆ ನನ್ನಲ್ಲಿ ನಿನಗೆ ವಾತ್ಸಲ್ಯವು ಅಧಿಕ ವಲ್ಲವೆ.

ರಾಮ—ಹಾ ತಂದೆ ಜಟಾಯುವೆ ನಿನ್ನಂಥಾ ಮಹಾನುಭಾವನು ಎಲ್ಲಿ ತಾನೆ ಸಂಭವಿಸ್ಯಾನು.

---

‡ ರಾಗ ॥ ಜಲಾಬು ॥ ರೂಪಕ ॥

ಖುಲ್ಲರು ಕನಕದ ಹುಲ್ಲೆ ಯಾದೆಸೆಯಿಂ ದೆಳೆಮಗನಿಸಿದ । ತಲ್ಲಣವೆಲವ । ನಿನ್ನ

ಲಕ್ಷ್ಮಣ— ಇದು ಜನಸ್ಥಾನಕ್ಕೆ ಪಶ್ಚಿಮಭಾಗದಲ್ಲಿರುವ ದನುನಾಮಕ

ನಾದ ಕಬಂಧನಿಂದ ಆಕ್ರಮಿತವಾದ ದಂಡಕಾರಣ್ಯ ಭಾಗವು. ಇದು ಮತಂಗಮುನಿಗಳ ಆಶ್ರಮವು. ಇವಳು ಶಬರಿಯು. ಇದು ಪಂಪಾ ಸರೋವರವು.

ಸೀತೆ—ಆಹಾ! ಇಲ್ಲಿಲ್ಲವೆ ಆರ್ಯಪುತ್ರನು ಧೈರ್ಯವನ್ನು ಬಿಟ್ಟು ಘಟ್ಟಿಯಾಗಿ ರೋದನಮಾಡಿದ್ದು.

ರಾಮ—ಎಲೆ ಜಾನಕಿ ಈ ಸರೋವರದಲ್ಲಿ.

ಕಂ॥ ಕಲಹಂಸಂಗಳ ಪಕ್ಷಗ |
ಳಲೆಯಿಂ ಕಲಸಿದಿದ [illegible]ವ ತಾವರೆಗಳನು ॥
ತ್ಪಲಗಳನೆಸೆವೀ ಯೆಡೆಯೊಳು |
ತುಳುಕುವ ಕಣ್ಣೀರಸಡುವೆ ನೋಡಿದೆನಾಗಳ್ ॥

ಲಕ್ಷ್ಮಣ—ಈತನು ಪ್ರಾಜ್ಞನಾದ ಹನುಮಂತನು.

ಸೀತೆ—ಈತನೆ ಲೋಕಾರ್ತ ಜನರನ್ನುದ್ಧರಿಸಿದ ಮಹೋಪಕಾರಿಯಾದ ಆಂಜನೇಯನು.

ರಾಮ—

ಕಂ॥ ದೇವಿಸುತಿ ದೈವಯೋಗದೆ |
ನಾವೀತನಸೇರಿ ಧನ್ಯರಾದೆವಲಾ ಲೋ ॥
ಕಾವಳಯೆಲ್ಲಮುಮಂ ತಾಂ |
ಪಾವನಮಂಗೈದ ಪರಮಪಾವನಪವನುಮಂ ॥

ಸೀತೆ—ಕುಸುಮಿತಗಳಾದ ಈ ವಕುಳ ವೃಕ್ಷಗಳಲ್ಲಿ ನರ್ತಿಸುವ ನವಿಲುಗಳಿಂದ ಮೆರೆಯುವ ಈ ಪರ್ವತವ್ಯಾವದು. ಇಲ್ಲಿ ಕಳೆಗುಂದಿದ್ದ ಲೂ ಸ್ವಭಾವವನ್ನು ಬಿಡಿಸ ಆರ್ಯಪುತ್ರನು ಮೂರ್ಛೆಯನ್ನು ಹೊಂದಿ

ಲಕ್ಷ್ಮಣ—

ಕಂ|| ನವಮೇಘಾತತಿಗೆ ಪದವಿಸಿ |
ಸುನ ಶಿಖರವನಾಂತ ಮಾಲ್ಯವದ್ಗಿರಿಯಿದುತಾಂ ||

ರಾಮ— ವಿವರಿಸದಿರನುಜ ಮುಂದಕೆ |
ಯುವತಿಯ ವಿರಹಾಗ್ನಿ ಮರಳಿ ತಪಿಸುತ್ತಿದೆನ್ನಂ ||

ಲಕ್ಷ್ಮಣ—ಇನ್ನು ಮುಂದಕ್ಕೆ ಕಪಿರಾಕ್ಷಸರುಗಳಿಗೆ ನಡೆದ ಆಶ್ಚರ್ಯಕರಗಳಾದ ಯುದ್ಧಕಾರ್ಯಗಳು ಬರೆಯಲ್ಪಟ್ಟಿರುವುವು. ಪೂಜ್ಯಳಾದ ಈಕೆಯಾದರೋ ಬಹಳವಾಗಿ ಬಳಲಿರುವಳು. ಆದ್ದರಿಂದ ಸ್ವಲ್ಪ ವಿಶ್ರಮಿಸಿಕೊಳ್ಳಲೆಂದು ವಿಜ್ಞಾಪಿಸುವೆನು.

ಸೀತೆ—ಆರ್ಯ ಪುತ್ರನೆ ಈ ಚಿತ್ರವನ್ನು ನೋಡಿದ್ದರಿಂದ ನನಗೊಂದು ಬಯಕೆಯುಂಟಾಯಿತು.

ರಾಮ—ಅದೇನು ಹೇಳು.

ಸೀತೆ—ಪುನಶ್ಚ ಮನೋಹರವಾದ ವನಗಳಲ್ಲಿ ವಿಹರಿಸುವುದಕ್ಕೂ ಜಗತ್ಪಾವನೆಯಾದ ಗಂಗೆಯಲ್ಲಿ ಸ್ನಾನಮಾಡುವುದಕ್ಕೂ ಬಯಸುವೆನು.

ರಾಮ—ಎಲೈ ವತ್ಸನೆ ಈಗತಾನೆ ಗುರುಗಳು ಈಕೆಯ ಬಯಕೆಯನ್ನು ಶೀಘ್ರವಾಗಿ ನೆರವೇರಿಸಬೇಕೆಂದಾಜ್ಞಾಪಿಸಿರುವರು. ಆದ್ದರಿಂದ ಕುಳಿತರೆ ಕುಲುಕದಂತಿರುವ ರಥವನ್ನು ಸಿದ್ಧಪಡಿಸು.

ಸೀತೆ—ಆರ್ಯಪುತ್ರನೆ ನೀನೂ ನನ್ನಸಂಗಡ ಬರಬೇಕು.

ರಾಮ—ಎಲೆ ಕಠಿಣಹೃದಯಳೆ ಇದನ್ನೂ ಹೇಳಬೇಕೆ.

ಲಕ್ಷ್ಮಣ—ಆರ್ಯನಾಜ್ಞೆಯಾದಂತಾಗಲಿ. (ಎಂದು ಹೋಗುವನು)

ರಾಮ—ಪ್ರಿಯೆ ಇತರರಿಗೆ ಮರೆಯಾಗಿರುವ ಈ ಸೌಧದಲ್ಲಿ ಸ್ವಲ್ಪ ವಿಶ್ರ

ಸೀತೆ—ಹಾಗೆಯೇ ಆಗಲಿ. ಬಳಲಿಕೆಯಿಂದುಂಟಾದ ನಿದ್ರೆಯಿಂದ ಪೀಡಿತ

ಳಾಗಿರುವೆನು.

ರಾಮ—ಆದರೆ ನನ್ನನ್ನು ಅವಲಂಬಿಸಿ ವಿಶ್ರಮಿಸಿಕೋ.

(ಕಾಂತೆಯಿಂದ ಆಲಿಂಗಿಸಲ್ಪಟ್ಟು)

ಕಂ॥ ನಿರ್ಣಯಿಸಲಾರೆ ನಿದನಾ |

ಕರ್ಣಾಯತನಯನೆ ಸುಖವೊ ದುಃಖವೊ ಕಂಡಾ ॥

ಘೂರ್ಣದೆನೋಂ ನಳಕೋಳಕೆ |

ವರ್ಣಿಪ್ಪುದೇಂ ಬಂದುದೆನಗೆ ಪರವಶಭಾವಂ ॥

ಸೀತೆ—ಪ್ರಿಯನೆ! ನೀನು ಸರ್ವದಾ ಪ್ರಸನ್ನ ಹೃದಯನು. ಇನ್ನು ಹೇಳ

ತಕ್ಕದ್ದೇನು.

*ರಾಮ—

ಸೀತೆ—ಪ್ರಿಯಂವದನೆ! ಮಲಗುವೆನು. (ತಲೆದಿಂಬನ್ನು ಹುಡುಕುವಳು)

ರಾಮ—ಪ್ರಿಯೆ! ಅದೇನನ್ನು ಹುಡುಕುವೆ?

ಕಂ॥ ಮದುವೆಯೊದಲಿಂದುವರೆಗಂ |

ಸದನದೆಮೋಳ್ವನದೆಬಾಲ್ಯಯೌವನಗಳೊಳಂ ॥

ಇದುಕರಳಕಯುನಕೆದೆವಾ |

ಗದರಾಮನ ಬಾಹು ನಿನಗೆ ತಲೆದಿಂಬೆನಿಕುಂ ॥

ಸೀತೆ—ಆರ್ಯಪುತ್ರನೆ! ಹಾಗೆಯೇ ಸರಿ. (ಮಲಗಿ ನಿದ್ರಿಸುವಳು)

---

* ರಾಗ ॥ ದೇಶಾಗ್ ॥ ಆದಿ ॥

ನಿನ್ನಯುವರಾತು | ಎನ್ನಜೀವಾತು ॥ ಪ ॥ ಅರಸಿದಮುಖೇಂದುವಿಂ | ಸುರವಸು ಧಾರಸ ಪ್ಪುರಿಗೆಯೊಂದ್ರೊಲಾ ದರದಿಂದಲಾಲಿದ ॥ ೧ ॥ ಕಾಂದರದೇಹದ ಕುಸು ಮವಿಕಾಸನೆ | ಇಂದುವಮುಖೀಶ | ಲೇಂದ್ರಿಯದೋಷನೆ ॥ ೨ ॥ ವರ್ಣಿಪ್ಪು

ರಾಮ— ... ಕಾಂತೆಯು ನನ್ನ ವಕ್ಷಸ್ಥಳದಲ್ಲಿ ಮಲ

ಗಿಬಿಟ್ಟಳು. (ಪ್ರೀತಿಯಿಂದ ಸವರಿ) *

ಆದರೆ ಈಕೆಯ ವಿಯೋಗಮಾತ್ರ ಉಂಟಾಗದಿದ್ದರೆ ಎಲ್ಲಾ ಪ್ರಿಯವೇ ಸರಿ.

ಪ್ರತಿಹಾರಿ—(ಬಂದು) ಎಲೈ ಮಹಾರಾಜನೆ ಸಮ್ಮುಖದ ಸೇವಕನಾದ ದುರ್ಮುಖನು ಬಂದಿರುವನು.

ರಾಮ—(ಸ್ವಗತಂ) ಅಂತಃಪುರಚಾರಿಯಾದ ದುರ್ಮುಖನೋ! ಇವನನ್ನು ಪುರಜನರ ವೃತ್ತಾಂತವನ್ನು ರಹಸ್ಯವಾಗಿ ತಿಳಿದುಬರುವಂತೆ ಹೇಳಿ ಕಳುಹಿಸಿದ್ದೆನು. (ಪ್ರಕ್ರಾ) ಒಳ್ಳೇದು ಬರಲಿ. (ಕರೆತರುವಳು)

ದುರ್ಮುಖ—(ಪ್ರವೇಶಿಸಿ) (ಸ್ವಗ) ಅಯ್ಯೋ! ಸೀತಾದೇವಿಯ ವಿಷಯದಲ್ಲಿ ನೆನೆಯ ಬಾರದ ಜನಾಪವಾದವನ್ನು ಮಹಾರಾಜನಿಗೆ ಹ್ಯಾಗೆ ತಾನೆ ವಿಜ್ಞಾಪಿಸಲಿ.

ಸೀತೆ—(ಕನವರಿಸುತ್ತ) ಹಾ! ಆರ್ಯಪುತ್ರನೆ ಎಲ್ಲಿದ್ದೀಯೆ.

ರಾಮ—ಚಿತ್ರವನ್ನು ನೋಡಿದ್ದರಿಂದುಂಟಾದ ಆ ದುಃಖವು ದೇವಿಗೆ ಕನಸಿನಲ್ಲಿ ಕಳವಳವನ್ನುಂಟುಮಾಡಿತು. (ಪ್ರೀತಿಯಿಂದ ಸವರಿ)

ಕಂ॥ ಬಂದೆಸೆದದುಃಖಸುಖಗಳಿಂ ।
ಕಂದುಂ ವಿಶ್ರಾಂತಿಯೆನಿಸಿ ಹೃದಯಕೆ ಜರೆಯೊಳ್ ॥
ತಂದೊದವುವಿರ್ದನೇಹದೊ ।
ಕೊಂದಿದದಾಂಪತ್ಯಕರ್ಥಿಸಂ ಮಂಗಳಮಂ ॥

ದುರ್ಮು—(ಬಂದು) ಮಹಾರಾಜನಿಗೆ ವಿಜಯವಾಗಲಿ.

ರಾಮ—ಎಲೈ ದುರ್ಮುಖನೆ ಏನು ತಿಳಿದು ಬಂದಿರುವೆ.

---

* ರಾಗ ॥ ಬೇಹಾಗ್ ॥ ರೂಪಕ ॥

ಈಕೆಯನಾನೆಂತೆಣಿಸುವೆನಹಹಾ ॥ ಪ ॥ ಈ ಕಣ್ಣಿಗೆ ಅಮೃತಾಂಜನ । ಮೈಕ ಜೀವನ । ಈ ಸೌಭಾಗ್ಯಲಕ್ಷ್ಮಿಯೆನಗೆ । ಲೋಕದೊಳಹಹಾ ॥ ೧ ॥ ತೋಳಿದನ್ನ ಕಂಠದಲ್ಲಿ । ತೋರಮುತ್ತಿನ । ಮಾಲೆಯಾಗಿ ತೋರ್ಪುದೇನ ಸೋಜಿಗವೆನಹಹಾ ॥ ೨ ॥ ಸೀರೆಯ ಸೋಕಿಂಗೆ । ಕರ್ಪೂರಲೇಪನ । ಸಂಸಾರವೆನಗೆ ಸಾರವಿವಳ ಸೇರಿದ

ದುರ್ಮು—ಮಹಾರಾಜನ ರಾಮನ ರಾಜ್ಯಭಾರದಲ್ಲಿ [illegible]
ಮಹಾರಾಜನನ್ನು ಮರೆದೆವೆಂದು ಪುರಜನರೆಲ್ಲರೂ ತಮ್ಮನ್ನು
ಕೊಂಡಾಡುತ್ತಿರುವರು.

ರಾಮ—ಈ ಸ್ತೋತ್ರಭಾಗ ಹಾಗಿರಲಿ. ಏನಾದರೂ ದೋಷವನ್ನು ಹೇಳಿ
ದ್ದರೆ ಹೇಳು. ಅದಕ್ಕೆ ತಕ್ಕ ಪ್ರತೀಕಾರವನ್ನು ಮಾಡೋಣ.

ದುರ್ಮು—(ದುಃಖದಿಂದ) ಮಹಾರಾಜನೆ ಲಾಲಿಸಬೇಕು. (ಕಿವಿಯಲ್ಲಿ ಹೇ
ಳುವನು)

ರಾಮ—(ಖಿನ್ನನಾಗಿ) ಅಹಾ ವಜ್ರಪ್ರಾಯವಾದ ಈ ವಚನವು ಕರ್ಣಕ್ಕೆ
ಘೋರವಾಯಿತಲ್ಲಾ! (ಮೂರ್ಛಿಸುವನು)

ದುರ್ಮು—ಮಹಾರಾಜನೆ ಸಂತೈಸಿಕೊಳ್ಳಬೇಕು.

ರಾಮ (ಎದ್ದು)—ಕಂ॥ ಅರಸಿಯ ಪರಗೃಹವಾಸದ ।
ಕೊರತೆಯ ನಾನಗ್ನಿಮುಖದಿ ಶೋಧಿಸಿದೊಡಂ ॥
ಮರಳಿ ಹತವಿಧಿವಿಪಾಕದಿ ।
ಕೆರಳಿದು ದುಸ್ಮೃತಿ ಕನಕವಿಷದಂತೀಗಳ್ ॥

ಅಯ್ಯೋ! ಮಂದಭಾಗ್ಯನಾದ ನಾನು ಇದಕ್ಕೆ ಏನು ತಾನೇ ಮಾಡಲಿ
(ಯೋಚಿಸಿ) ಇನ್ನು ಬೇರೆ ಮಾಡತಕ್ಕದ್ದೇನು ? ಯಾವ ಪ್ರಕಾರದಿಂದಲಾ
ದರೂ ಲೋಕ ಮೆಚ್ಚುವಂತೆ ನಡೆಯುವದೆ ಸತ್ಪುರುಷರಿಗೆ ಕುಲವ್ರತವು.
ಆದ್ದರಿಂದಲೆ ನನ್ನ ತಂದೆಯು ನನ್ನನ್ನು ಮತ್ತು ತನ್ನ ಪ್ರಾಣಗಳನ್ನು ಬಿಟ್ಟ
ನಲ್ಲದೆ ಲೋಕಾರಾಧನ ವ್ರತವನ್ನು ಬಿಡಲಿಲ್ಲ. ಈಗತಾನೆ ವಸಿಷ್ಠರಿಂದ
ಆಜ್ಞಾಪಿಸಲ್ಪಟ್ಟಿರುವೆನು.

ಕಂ॥ ಕುಲವಿದು ಪೂರ್ವದನ್ವಯರಿಂ ।
ಬೆಳಗಿದುದಾಕುಲದೊಳೆನ್ನ ಸಂಬಂಧದೆ ಳ್ ॥
ಕ್ಕುಲವಾದಪವಾದಂಬರೆ ।
ನೆಲನೊಳು ನಾಂ ಬಾಳ್ವ ಫಲಮದೇಂ ತೆಗೆಯುಕಟಾ ॥ *

---

* ರಾಗ ॥ ಮುಖಾರಿ ॥ ಆದಿ ॥

ಏನಿದು ಹಾಹಾಜಾನಕಿ | ಏನನೆಂದೆನಾಂ ಜಲಜಮುಖಿ ॥ ಪ ॥ ಜಾನಕಿಯು ದೇವ
[illegible]

ಕಂ॥ ನಿನ್ನರಮನೆಯ ಮಾಯೆಳ್ |
ನಿನ್ನಲ್ಲಿ ಜನೋಕ್ತಿ ತಾನೆ ಪಾವನಮೆನಿಕುಂ ॥
ನಿನ್ನಿಂದೆನಗಾಥರ್ಜನ |
ರೆನ್ನುವರೇಂ ನೀನನಾಥೆಯಾದೆಯದಯಿತೆ ॥

ಎಲೈ ದುರ್ಮುಖನೆ ನೂತನನಾದ ರಾಮನು ಹೀಗೆ ಅಜ್ಞಾಪಿಸಿ ದನೆಂದು ಕುಮಾರ ಲಕ್ಷ್ಮಣನಿಗೆ ತಿಳಿಸು.

(ಕಿವಿಯಲ್ಲಿ ಹೇಳುವನು)

ದುರ್ಮು—ಇದೇನು ಅಗ್ನಿಪರಿಶುದ್ಧೆ ಯಾಗಿಯು ಪವಿತ್ರಗಳಾದ ರಘುಕುಲ ಸಂತಾನಗಳನ್ನುದ್ಧರಿಸಿದವಳಾಗಿಯೂ ಇರುವ ದೇವಿಯ ವಿಷಯ ದಲ್ಲಿ ದುರ್ಜನರಾಡಿದ ಮಾತಿಗಾಗಿ ಮಹಾರಾಜನು ಹೀಗೆ ಅಲೋಚಿ ಸುವನು.

ರಾಮ—ಸಾಕುಸಾಕು ಸುಮ್ಮನಿರು. ಪುರಜನರನ್ನೂ ದೇಶದ ಜನರೆಲ್ಲ ರನ್ನೂ ದುರ್ಜನರೆನ್ನತಕ್ಕದ್ದು ಹ್ಯಾಗೆ. ಇಕ್ಷ್ವಾಕುವಂಶವಾದರೊ ಪ್ರಜೆಗಳಿಗೆಲ್ಲಾ ಅಭಿಮತವಾದದ್ದು. ಇಂಥಾ ಕುಲದಲ್ಲಿ ದೈವ ಯೋಗದಿಂದ ಅಪವಾದ ಉಂಟಾಯಿತು. ದೇವಿಗೆ ನಾವು ದೂರದಲ್ಲಿ ನಡೆಸಿದ ಅದ್ಭುತವಾದ ಕಾರ್ಯವನ್ನು ಇಲ್ಲಿನವರು ಏನುಬಲ್ಲರು, ಇನ್ನು ನಿನ್ನ ಕಾರ್ಯವನ್ನು ಮಾಡು. ನಡೆ.

(ಹಾ ದೇವಿ) ಎಂದು ತೆರಳುವನು.

ರಾಮ—ಅಯ್ಯೋ ಕೊನೆಗೆ ಎಂಥಾ ಕೆಟ್ಟ ಕೆಲಸವನ್ನು ಮಾಡುವನಾದೆ ಇಂಥಾಕ್ರೂರನು ಎಲ್ಲಾದರೂ ಉಂಟೆ.

ಕಂ॥ ಬಾಲತೆ ಮೊದಲಾಗಿವಳಂ |
ಪಾಲಿಸಿ ನಂಬಿಸಿಯೆ ಯದೆಯೊಳೊರಗಿರ್ದಳನಾಂ ॥

---

ನಂಬ್ಯ | ಶೀಲಶಾಲಿನಿ | ಈ ವಿಧಾಪವಾದಕೆ | ಯೋಗ್ಯವಾದೆ ॥ ೨ ॥ ಕೋಪವುಳ್ಳಂ

ಕಾಲಂಗಳೆಂಪೋಗನದೊ |

ಜಾಲಮದೊಳ್ಸೆರೆದ ಪಕ್ಷಿಯಂ ಕಟುಕನವೋಲ್ ||

ಆದ್ದರಿಂದ ಮುಟ್ಟುವದಕ್ಕೂ ಅರ್ಹನಲ್ಲದ ಪರಮ ಪಾಪಿಯಾದ ನಾನು ದೇವಿಯನ್ನು ಮುಟ್ಟಿಕೊಂಡಿರುವದು ಹ್ಯಾಗೆ (ಸೀತೆಯನ್ನು ಕೆಳಗೆ ಮಲಗಿಸಿ)*

ಕಂ|| ದೇವಿಯವಿಯೋಗದುಃಖದೆ |

ಜೀವದಕೀ ರಾಮನಲ್ಲಿ ನಿಂತುದು ಜೀವಂ ||

ಏನೆಂಳ್ವೆ ಕಷ್ಟಮಿಾ [illegible]

[illegible]ಗಾವಳಿ ಹೃದಯಕ್ಕೆ ವಜ್ರಕೀಲದೊಲಾಯ್ತು ||

ಹಾ ಪೂಜ್ಯಳಾದ ಅರುಂಧತಿಯೆ, ಹಾ ಪೂಜ್ಯರಾದ ವಸಿಷ್ಠ ವಿಶ್ವಾಮಿತ್ರರೆ, ಹಾ ಪೂಜ್ಯನಾದ ಯಜ್ಞೇಶ್ವರನೆ, ಹಾ ಪರಮೋಪಕಾರಿಯಾದ ವಿಭೀಷಣನೆ, ಹಾ ! ಪ್ರಿಯ ಸಖನಾದ ಸುಗ್ರೀವನೆ, ಹಾ ಚಿರಂಜೀವಿಯಾದ ಹನುಮಂತನೆ, ಈ ದುಷ್ಟ ರಾಮನಿಂದ ನಿಮ್ಮ ಸರ್ವಸ್ವವನ್ನೂ ಕಳಕೊಂಡು

---

* ರಾಗ || ನಾದನಾಮಕ್ರಿಯೆ || ಗತಿ ||

ಮುಗುದೆ ಪೋಷಿಸಿದುದ ಕಾದುದೆ || ಪ || ಕಾಂತೆ ನೀನೆಂತಪ್ಪ | ಕರ್ಮಫಲಂ ತಾಳಿಗೆ | ಕಾಂತೆಯಾಗುವದಕೇಂ | ನೊಂತೆಯೊ ಹಾ ಹಾ || ೧ || ಶ್ರೀಕರಚಂದನಾ | ನೋಕಪಭ್ರಾಂತಿಯಿಂ | ನೇಕೆಪೊಂದಿದೆ ದುರ್ಗ | ಪಾಶವಿಷಧರುವನ್ನು || ೨ || ಬಿಡು ಬಿಡು ಧೂರ್ತನಗೊಡವೆಯೇತಕೆ | ಕೈವಿಡಿದುದು ಕಾದುದೆ| ಕಷ್ಟಗೀಸುಖವು ಹಾ ಹಾ || ೩ ||

(ಮೇಲಕ್ಕೆ ಎದ್ದು)

ರಾಗ || ತೋಡಿ ||

ಈಗ ಜಗತ್ತಿದನ್ನು ದುಃಖಾಗಳ ಹೋದುದು ನಿಶ್ಚಯ | ಹೆಗೆ ಹೆಗೆ ರಾಮನಬಾಳಿಕೆ || ಜಗದೊಳಗಿನ್ನ ಕಟ್ಟೀತಕೆ ||೧|| ಧರೆಯೊಳಗೀ ಶರೀರವು | ಧರಿಸಲತಿಭಾರವು ||೨|| ಪಾತಕಿಸದೀ ಸಂಸಾರವು | ಬರೆದುಂದವದೇನಸಾರವು ||೩|| ಶಿವಮುಖಿಗಾದುದೀ

ಕಷ್ಟರು. ಅಥವಾ ಇವರ ನಾಮಸ್ಮೃತಿಯನ್ನು ಮಾಡುವದಕ್ಕೆ ತಾನೆ ನನಗೆ ಯೋಗ್ಯತೆಯಲ್ಲಿರುವದು ಕೃತಘ್ನನಾದ ನಾನು ಇವರ ನಾಮಸ್ಮರಣೆಯನ್ನೆತ್ತಿದರೆ ಇವರಿಗೂ ಪಾಪಲೇಪ ಉಂಟಾದೀತೊ ಏನೋ ಯಾತಕ್ಕೆಂದರೆ.

ಕಂ॥ ನಂಬುತೆದೆಯಲ್ಲಿ ಮಲಗಿದ।
ತುಂಬಿದ ಗರ್ಭಿಣಿಯ ಗೃಹಕೆ ಲಕ್ಷ್ಮಿಯೆನಿಪ್ಪಾ॥
ಯಂಬುರುಹಮುಖಿಯಬಿಡುತೇ।
ನೆಂಬೇಂ ಮಾಂಸಾಶನಗ್ಗೆ ಬಲಿಗೊಟ್ಟೆನೆನಾಂ॥

(ಗಲ್ಲವನ್ನು ಹಿಡಿದು) ಪ್ರಿಯೆ! ನಿನ್ನ ದರ್ಶನವಿಲ್ಲಿಗಾಯಿತೆ (ರೋದಿಸುವನು)

ತೆರೆಯಲ್ಲಿ—ಮಹಾರಾಜನೆ ಬದುಕಿಸು, ಬದುಕಿಸು.

ರಾಮ—(ಗಾಬರಿಯಿಂದ) ಇದೇನು ತಿಳಿಯೊಲ್ಲ,

ತೆರೆಯಲ್ಲಿ—ಯಮುನಾತೀರವಾಸಿಗಳಾದ ಋಷಿಗಳು ಲವಣಾಸುರನಿಂದ ಭೀತರಾಗಿ ನಿನ್ನನ್ನು ಮೊರೆಹೊಕ್ಕಿರುವರು.

ರಾಮ—ಆಹ ಇದೇನು ಇನ್ನೂ ರಾಕ್ಷಸರ ಭಯತಪ್ಪಲಿಲ್ಲವೆ ಆಗಲಿ ಆ ದುರಾತ್ಮನಾದ ಲವಣಾಸುರನನ್ನು ಸಂಹರಿಸುವುದಕ್ಕೆ ಶತ್ರುಘ್ನನನ್ನು ಕಳುಹಿಸುವೆನು.

(ಸ್ವಲ್ಪ ನಡೆದು ಹಿಮ್ಮೆಟ್ಟಿ ಸೀತೆಯ ಗಲ್ಲವನ್ನು ಹಿಡಿದು)

ಹಾ ದೇವಿ ನನ್ನನ್ನು ಸೇರಿ ಈ ಅವಸ್ಥೆಗೆ ಗುರಿಯಾದೆಯು. *

(ದುಃಖದಿಂದ ತೆರಳಿದನು)

---

ರಾಗ ॥ ಜಂಜೋಟಿ ॥

ಭೂಮಿದೇವಿಪಾಲಿಸು ವೈದೇಹಿಯಳ ॥ಪ॥ ಅನವರತದರಸರ । ಮನಗಿಮಂಗಳ ಯಾದ । ಜನಕಕುಲಾಂಬುಧಿಲಕ್ಷ್ಮಿಯು ॥೧॥ ದೇವದಾನಗದೊಳಾಂಧೂ । ದೇವಿ ನೀನವೆ ಬೆಕ್ತ ಮಾಪ್ತನಾದೀಸೀತೇಯಾ ॥೨॥ ಮಾನವಿನಾಂದರವಾಡಾ । ಮನೆಯಂ

ಸೀತೆ—(ಕನವರಿಸುತ್ತ) ಹಾ ಆರ್ಯಪುತ್ರನೆ ಎಲ್ಲಿರುವಿ. (ಜಾಗ್ರತೆಯಾ
ಗಿ ಎದ್ದು) ಹಾ ತಗೆತಗೆ. ಆರ್ಯಪುತ್ರನನ್ನು ಅಗಲಿದಂತೆ ದುಸ್ವಪ್ನ
ವನ್ನು ಕಂಡು ಕಳವಳಿಸಿದೆನು. (ಅತ್ತಿತ್ತ ನೋಡಿ) ಅಯ್ಯೋ ಇ
ದೇನು! ಆರ್ಯಪುತ್ರನು ಮಲಗಿದ ನನ್ನೊಬ್ಬಳನ್ನೇ ಬಿಟ್ಟು ಹೊರಟು
ಹೋದನು. ಇರಲಿ. ಈಗೇನು! ಆರ್ಯಪುತ್ರನನ್ನು ಕಂಡಕೂಡಲೇ
ನನ್ನ ಮನಸ್ಸನ್ನು ತಡೆದುಕೊಳ್ಳುವಳೇ ಆದರೆ ಆಗ ಆತನಮೇಲೆ
ಕೋಪಿಸಿಕೊಳ್ಳುವೆನು. ಆದ್ಯಾರು ಹೊರಗೆ

ದುರ್ಮುಖ—(ಪ್ರವೇಶಿಸಿ) ಎಲೌ ದೇವಿಯೆ ಕುಮಾರಲಕ್ಷ್ಮಣನು ರಥವು
ಸಿದ್ಧವಾಗಿರುವದೆಂದು ವಿಜ್ಞಾಪಿಸುವನು.

ಸೀತೆ—ಇದೋ ಬರುತ್ತೇನೆ. ಎಲ್ಲಿ ವತ್ಸ ಲಕ್ಷ್ಮಣನು.

ದುರ್ಮುಖ—ಇದೋ ಬರುತ್ತಿರುವನು. ಎಲೌದೇವಿಯೆ ಈಕಡೆಗೆ ದಯ
ಮಾಡಿಸಬೇಕು.

ಲಕ್ಷ್ಮಣ—(ಖಿನ್ನನಾಗಿ ಪ್ರವೇಶಿಸಿ) ಆರ್ಯೆ ರಥವನ್ನು ಸಿದ್ಧಪಡಿಸಿರು
ವೆನು. ಬಿಜಯಂಗೈಯ್ಯಬೇಕು.

ಸೀತೆ—ಇದೋ ಬರುವೆನು ಗರ್ಭವು ಅಲ್ಲಾಡುವದರಿಂದ ಮೆಲ್ಲಗೆಹೋಗೋ
ಣ. ಎಲೈ ವತ್ಸನೆ ಸ್ವಲ್ಪತಾಳು ಆಶ್ರಮದ ಮುನಿಪತ್ನಿಯರಿಗೆ ಬಾ
ಗಿನಗಳನ್ನು ಕೊಡುವುದಕ್ಕೆ ತಕ್ಕ ಮಂಗಳದ್ರವ್ಯಗಳನ್ನು ಸಿದ್ಧಪಡಿ
ಸಿಕೊಂಡು ಬರುವೆನು. (ಒಳಕ್ಕೆ ಹೋಗುವಳು)

*ಲಕ್ಷ್ಮಣ—ಅಯ್ಯೋ ಆರ್ಯೆಯು ಯಾವಪಾಪವನ್ನೂ ಕಾಣಳಲ್ಲಾ. ಆರ್ಯ
ನಾದರೆ ಕಾಡಿಗೆ ಬಿಟ್ಟುಬರುವಂತೆ ಆಜ್ಞಾಪಿಸಿರುವನು. ಈಕೆಯು

---

* ರಾಗ ॥ ನಾದನಾಮಕ್ರಿಯೆ ॥ ರೂಪಕ ॥

ಗತಿಯೇನಿದಕೆಗೈವೆನು । ಪತಿದೇವತೆಯಾದಾ । ಕ್ಷಿತಿಜಾತೆಯು । ಪಾಪಮದಾತೆಯು।
ವನಕ್ಕೆಬಿಡನೆಂತೋಹಾಹಾ ॥ ೧ ॥ ಜನಕಗೆನಂದನೆಯೆನಿಸುತೆ । ಮನುಕುಲಧರ
ಸನಿಗೆ । ವನಿತಾಮಣಿಯೆನಿಸಿಯುಬಾ । ಪಿನಗೀಗತಿಯಾಯ್ತೆ ಹಾಹಾ ॥ ೨ ॥ ಅಂದಾ
ರಾಕ್ಷಸವಂದಿರ । ಬಂಧನದೊಳುನೊಂದೆ । ಇಂದೀಪರಿಯಾದಳಲಿಗೆ । ಸಂದೆಯಾ

ನ್ನು ಹ್ಯಾಗೆತಾನೇ ವಂಚಿಸಿ ಬಿಟ್ಟು ಬರಲಿ. ಹಾ ದೈವವೆ ಕೊನೆಗೆ ಇಂಥಾಕಾರ್ಯಕ್ಕೆ ಗುರಿಮಾಡಿದೆಯಾ.

ಸೀತೆ—(ಬಂದು) ವತ್ಸನೆ ಇನ್ನು ನಡೆ. ಗರ್ಭವು ಕುಲುಕುವದರಿಂದ ಮೆಲ್ಲಗೆ ರಥವನ್ನು ನಡೆಸುವನಾಗು.

ಲಕ್ಷ್ಮಣ—ಅಪ್ಪಣೆಯಾದಂತಾಗಲಿ.

* ಸೀತೆ—

( ಎಂದು ಹೋಗುವರು )

ಅರಣ್ಯ

( ರಥಾರೋಹಣಳಾದ ಸೀತೆಯು ಲಕ್ಷ್ಮಣನೊಡನೆ ಪ್ರವೇಶ )

( ಘೋರಾರಣ್ಯವನ್ನು ನೋಡಿ ಹೆದರಿ )

† ಸೀತೆ—

ಲಕ್ಷ್ಮಣ—ಅಯ್ಯೋ ಈಗ ಏನುಮಾಡಲಿ ಹೇಳುವದೂ ಕಷ್ಟ. ಹೇಳದಿದ್ದರೆ ಆರ್ಯೆಯು ಸುಮ್ಮನೆ ಬಿಡಳು. ಹಾಹಾದೈವವೆ (ಯೋಚಿಸುವನು)

ಸೀತೆ—ವತ್ಸನೆ ಯಾತಕ್ಕೆ ಸುಮ್ಮನಿರುವೆ.

---

* ರಾಗ ॥ ಹಿಂದೂಸ್ಥಾನಿ ಕಾಪಿ ॥ ಆದಿತಾಳ ॥

ವಂದಿಸುಗುರುಜನ | ವೃಂದಕೆ | ನಾನು ॥ ಪ ॥ ವಂದಿಸೆನಿಜಪದ | ವಂದಕಜನತಾ | ನಂದಿತಬೋಧನ | ಬೃಂದಕೆನಾನು ॥ ೧ ॥ ವಂದಿಪೆನಿಜಪದವು | ರಘುಕುಲದೇವತಾ | ಬೃಂದಪದಾಂಬುಜ | ದ್ವಂದ್ವಕೆನಾನು ॥ ೨ ॥ ವಂದಿಪೆರವಿಕುಲ | ನಂದಾದ್ಯಭೃತ್ಯನ | ಸುಂದರಪಾದರ | ವಿಂದಕೆನಾನು ॥ ೩ ॥

† ರಾಗ ॥ ಜಂಜೋಟಿ ॥ ಆದಿ ॥

ಏನಿದೇನುಸ್ವಾಮಿ ಪ್ರಿಯಾ | ಕಾನನಾಂತಕೆಕರೆತಂದೆ ಹಾ | ಸ್ವಾಮಿ ಪ್ರಿಯಾ ॥ ಪ ॥ ಎತ್ತನೋಡೆಕೆಳಗೆ | ಕಗ್ಗತ್ತಲೆಕವಿವುದು | ಸುತ್ತನೋಡೆಚಿತ್ತವಿದು | ತತ್ತರಿಪುದುಸ್ವಾಮಿ ಪ್ರಿಯಾ ॥ ೧ ॥ ಎಲ್ಲಿನೋಡಲೆನ್ನದೆ | ಝಲ್ಲೆನುತಲಿರ್ಪುದು | ಇಲ್ಲಿಗೇತಕೆನ್ನ | ಕರೆತಂದೆಯದೇನ್ಸ್ವಾಮಿ ಪ್ರಿಯಾ ॥ ೨ ॥ ತೋರದಿಲ್ಲಿಪುಣ್ಯಾಶ್ರಮವು | ತೋರುತಿದೆದೇಶಕ್ರಮ | ಘೋರವನಕ್ಕೆಬಿಡುವ | ಕಾರಣವೇನ್ಸ್ವಾಮಿ

ಲಕ್ಷ್ಮಣ—ಆರ್ಯೆ ಏನುಹೇಳಲಿ. (ಕಿವಿಯಲ್ಲಿ ಹೇಳುವನು)

ಸೀತೆ—ಹಾ ಆರ್ಯಪುತ್ರನೆ. ಹಾ ರಘುಕುಲಧುರಂಧರನೆ (ಮೂರ್ಛಿ ಸುವಳು)

ಲಕ್ಷ್ಮಣ— ಹಾ ಆರ್ಯೆ ಸಂತೈಸಿಕೊಳ್ಳಬೇಕು: ಸಂತೈಸಿಕೊಳ್ಳಬೇಕು. (ವಸ್ತ್ರದಿಂದ ಬೀಸುವನು)

ಸೀತೆ—ಸಂತೈಸಿಕೊಂಡು ಎದ್ದು. *

ಕಂ॥ ಎನಗೋಸುಗ ಬಹುಕಷ್ಟವ |
ನನುಭವಿಸುತ ಬಳಲಿಕೊಂಡು ಉರಿಯೊಳಗೆನ್ನಂ ॥
ಮನವೊಪ್ಪಿ ಪರಿಗ್ರಹಿಸಿದ |
ಮನುಕುಲಪತಿಯಿಂದು ವನದಿ ಬಿಡುವೇಳ್ದನೆ ಹಾ ॥ ‡

ಹಾ ವತ್ಸನೆ ಪಾಪಿಯಾದ ರಾವಣನನ್ನು ಸಂಹರಿಸಿದ ಬಳಿಕ ಸರ್ವರೂ ತಿಳಿಯುವಹಾಗೆ ನನ್ನನ್ನು ಯಜ್ಞೇಶ್ವರನಲ್ಲಿ ಹೊಗಿಸಿದ ಸಂಗತಿಯನ್ನು ಆರ್ಯಪುತ್ರನು ಮರೆತರೆ ಅದನ್ನು ತಿಳಿದಿದ್ದ ಸೀತಾ

---

* ರಾಗ ॥ ಸಹನ ॥ ತ್ರಿಪುಟ ॥

ದೈವವೇ | ಈವಿಧಗೈವುದೆ ಹಾಹಾ ॥ ಪ ॥ ಮನದೊಳಗೆಂದಾದ | ಮನೆಯಲ್ಲಿರದ ಸ್ವದ | ನೆನೆಯದಿರ್ದ ಕಾಂತ | ಮನಸಾಕ್ಷಿಯಲ್ಲಿ ಹಾ ॥ ೧ ॥ ಪರಿಸಿದ್ದುದೊ ದಲಾಗೆ | ನ್ನರಕುರಾಮನೆಜೀವೇ | ಕ್ಷ[illegible]ಯಜ್ಞೇ | ಶ್ವರಸಾಕ್ಷಿಯಲ್ಲಿ ಹಾ ॥ ೨ ॥ ಎನ್ನ ಮನದ ಮಾನ | ದನ್ನು ತಿಳಿದು [illegible] | [illegible]ನ್ನಳವಾಡಿದುದಂ | ದಿನ್ನೇನುಗತಿ ಹಾ ಹಾ ॥ ೩ ॥

‡ ರಾಗ ॥ ಹಿಂದೂಸ್ಥಾನಿ ಭೈರವಿ ॥ ಏಕತಾಳ ॥

ಎಂತು ಬಿಟ್ಟುಬಿಟ್ಟ | ಕಾಂತನ ಮಾಡುವು | ಚಿತವೆ ಹಾ ॥ ಪ ॥ ರಾಮನ ಸುಗುಣ ಧಾಮನ ಪ್ರಾಣೇ | ಶಾಮನ ರಘುವರ ಕಾಂಭೋಧಿಸೋಮನ ॥ ೧ ॥ ನೀರಜನಾ ಭವ್ಯ ಕಾವನಲೋಕಾ | ಧಾರನ ವೀರರಣ ಸಮರಧೀರನ ॥ ೨ ॥ ಕಾಂತನ ಕರುಣಾ |

ದರೂ ಎಚ್ಚರಿಸಬಾರದಾಗಿತ್ತೆ. ಅಯ್ಯೋ ದೈವವೇ.

(ಮೂರ್ಛೆಸುವಳು)

ಲಕ್ಷ್ಮಣ—ಆರ್ಯೆ ಅಪ್ಪಣೆಯೆ ಇದೋ ಕೃತಘ್ನನಾದ ಲಕ್ಷ್ಮಣನು ನಮಸ್ಕರಿಸುವನು.

(ಹೊರಟು)—ಕಂ॥ ಜನಕನಸತ್ಯಕಾರ್ಯಂ |
ವನಕೈದಲ್ಕೆಂದು ತನ್ನ ಜನನಿಯುತೆರದಿಂ ॥
ಮನೆವಾರೆಸಲರಿದೀಕ್ಷಿತಿ |
ತನುಜೆಯುಕಾಡಿನೊಳಬೆಂತು ಬಿಟ್ಟೈದಲಿ ದಾ ॥

ಮಾಡತಕ್ಕದ್ದೇನು. ಆರ್ಯನ ಆಜ್ಞೆಯು ಅಲಂಘ್ಯವಾದದ್ದು, (ನಮಸ್ಕರಿಸಿ) ಎಲೈ ಕುಲಪತಿಯಾದ ಸೂರ್ಯನಾರಾಯಣನೆ ಎಲಾ ಕುಲೋದ್ಧಾರಿಣಿಯಾದ ಗಂಗಾದೇವಿಯೆ, ಎಲಾ ಸಕಲ ಚರಾಚರಾಧಾರಿಯಾದ ಭೂದೇವಿಯೆ, ಸರ್ವಪ್ರಕಾರದಿಂದಲೂ ಆರ್ಯೆಯನ್ನು ಕಾಪಾಡಿಕೊಳ್ಳುವರಾಗಿರಿ ನಾನಂತೂ ಹೋಗಿಬರುವೆನು. (ಎಂದು ಹೋಗುವನು)

---

ರಾಗ॥ ಕಾಂಭೋಜಿ॥ ತ್ರಿಪುಟ॥

ಆವನು | ಆಡುವದೇಕಿಂತುನನ್ನ | ಕಿತ್ರಾಳಕವು ದಧಲವು ॥ಪ॥ ಕಡೆಗೆದಯಾಳಂರಾಘವನನ್ನೂ ತಪ್ಪಿಲ್ಲ | ನ.ಡಿವ್ವರೇನಣುಗನಿನ್ನಲ್ಲೂ ತಪ್ಪಿಲ್ಲ | ಕಡುಪಾತಕಿನಾಂ | ಹೆಣ್ಣಾಗಿಹುಟ್ಟಿದಂ | ದೊಡಲಘೋರವುದನ್ನದೆ ತಪ್ಪಿಲ್ಲದೆ ॥೧॥

ಭಾಮಿನೀ ಷಟ್ಪದಿ.

ಕಂದನಿಂನಡೆಕೊಂದುಕೊಂಡೊಡೆ | ಬೆಂದೊಡಲೊಳಿದೆ ಬಸಿರದಂದಾಗ | ಬಂದುದನುಭವಿಸುವೆನು ಮರಳುದಿದೇಳು ನೀನೆನುತ ॥ ಎಂದುಸಿತ್ರಯರಾಜಧರ್ಮಕೆ | ಕುಂದುಬರದೊಲು ನಡೆವುದನ್ನುತೆ | ಮಂದಭಾಗ್ಯಳು ಸೀತೆ ನಮಿಸಿದ

ಸೀತೆ—(ಎದ್ದು ನೋಡಿ ಅತ್ಯಂತದುಃಖದಿಂದ) *

ಕಂ॥ ಹಾ ತಾತ ಜನಕರಾಜನೆ ।

ಹಾ ತಾಯೆಯೆ ಭೂಮಿದೇವಿ ಯೀಪಾತಕಿಯಂ ॥

ಪತಿಕಳೆದಿತ್ತಿರಿಸೀವೆಳ ।

ಚೀತರವಾದಳಲೆಂತು ಸೈರಿಪೆ ಹಾ ಹಾ

(ರೋದಿಸುತ್ತ ಹೋಗುವಳು)

* ಪ್ರಥಮಾಂಕಂ ಸಂಪೂರ್ಣಂ *



---

* ರಾಗ ॥ ತೋಡಿ ॥ ಗತಿತಾಳ ॥

ಹಾ ಆರ್ಯಪುತ್ರನೆ । ಹಾ ಸುಚರಿತ್ರನೆ । ಹಾ ಸರಸಿಜನೇತ್ರ । ಹಾ ಕರುಣಾ ಸುಪಾತ್ರನೆ ॥ ೧ ॥ ಹಾ ಮಮಮಾನಸ । ಹವಿಷ್ಯಾಗ್ರವಾಸಿಯೆ । ರಾಮ ಗುಣಾಭಿರಾಮಹಾ । ತಾಮರಸಾನನ ॥ ೨ ॥ ಕಾಂತನೆನಿನ್ನದಿ । ದಾವರೀತಿ

# ೨ ನೇ ಅಂಕ ಪ್ರಾರಂಭಃ.



ತೆರೆಯಲ್ಲಿ—ತಾಪಸಿಗೆ ಸುಸ್ವಾಗತವೆನನೆ.

ತಾಪಸಿ—(ಪ್ರವೇಶಿಸಿ) ಆಃ ಈ ವನದೇವತೆಯು ಫಲಕುಸುಮ ಪಲ್ಲವಾ ರ್ಘ್ಯಗಳನ್ನು ಹಿಡಿದುಕೊಂಡು ಬಳಿಯಲ್ಲಿ ನಿಂತಿರುವಳು.

ವನದೇವತೆ—(ಪ್ರವೇಶಿಸಿ ಅರ್ಘ್ಯವನ್ನು ಕೊಟ್ಟು) *

ತಾಪಸಿ—ಈ ವಿಷಯದಲ್ಲಿ ಹೇಳತಕ್ಕದ್ದೇನು.

ಕಂ॥ ಪ್ರಿಯವರ್ತನೆಯೊಳ್ಮೆಂಗಳ ।
ಮೆಯಮತಿಮಿತವಾಣಿ ಬಿಂದುವುಂದೊಂದೆಸೆಗಾ ॥
ಕಯವವ್ಯಾಜಪ್ರೇಮಂ ।
ನೆಯವಿದರಪಸಾಧುಗಳ ಚರಿತ್ರಮಿದಿಳೆಯೊಳ್ ॥

(ಇಬ್ಬರೂ ಕುಳಿತುಕೊಳ್ಳುವರು)

ವನದೇವತೆ—ಪೂಜ್ಯಳೆ ನೀನು ಯಾರು.

ತಾಪಸಿ—ಎಲೌ ವನದೇವತೆ ನಾನು ಆತ್ರೇಯಿಯು.

---

* ರಾಗ ॥ ಶಾಲಕ ॥ ಏಕತಾಳ ॥

ವನವಿದುನಿಮ್ಮದುಭೋಗಿಸುವ್ವದುನೀ । ವೆಮಗೀದಿನಸುದಿನಂಜನಿಸಿತುಸುದು ನ । ಜ್ಞನರಿಗೆಸುಕೃತದಿನ । ಜ್ಞನರೊಡನನುಷಂಗಂ ॥ ೧ ॥ ವನತರುಗಳನೆ ಳಲಿದುವಿಮಲೋದಕ । ವನಫಲಭೋಜನಯೋಗ್ಯಂ । ಎನಿಸಿದಫಲಮೂಲಾಶನ ವಿಧೋಚಿತಾಂ ಪರಿಕಂಕಮುದಿಂದಲಂ ॥ ೨ ॥

ವನದೇವತೆ—ಆರ್ಯೆ, ಇತ್ತಲ್ಲಿಗೆ ಬರುವ ದಂಡಕಾರಣ್ಯವನ್ನು ಸೇರುವು
ದಕ್ಕೆ ಪ್ರಯೋಜನವೇನು.

ತಾಪಸಿ—ಇಲ್ಲಿ ಅಗಸ್ತ್ಯಪ್ರಮುಖರಾದ ಬ್ರಹ್ಮರ್ಷಿಗಳು ವಾಸಿಸುತ್ತಿರು
ವರು. ಅವರಮುಖದಿಂದ ವೇದಾಂತ ವಿದ್ಯೆಯನ್ನು ತಿಳಿಯುವದ
ಕ್ಕೋಸ್ಕರ ವಾಲ್ಮೀಕಿಗಳಾಶ್ರಮದಿಂದ ಇಲ್ಲಿಗೆ ಬಂದೆನು.

ವನದೇವತೆ—ಇದೇನು? ಎಲ್ಲಾ ಮುನಿವರರೂ ಬ್ರಹ್ಮಪಾರಾಯಣಕ್ಕಾಗಿ ಆ
ವಾಲ್ಮೀಕಿಗಳನ್ನೇ ಉಪಾಸಿಸುತ್ತಿರುವರಲ್ಲಾ. ಹೀಗಿರುವಲ್ಲಿ ಬಹು
ದೂರ ಬರುವ ಪ್ರಯಾಸ ನಿನಗೇತಕ್ಕೆ.

ತಾಪಸಿ—ಅಲ್ಲಿ ವೇದಾಂತಶಾಸ್ತ್ರಾಧ್ಯಯನಕ್ಕೆ ದೊಡ್ಡ ವಿಘ್ನಸಂಭವಿಸಿತು.
ಆದ್ದರಿಂದ ಎಷ್ಟು ದೂರವಾದರೂ ಬರಬೇಕಾಯಿತು.

ವನದೇವತೆ—ಅದೆಂಥಾ ವಿಘ್ನ ಹೇಳು.

ತಾಪಸಿ—ಯಾವಳೋ ಒಬ್ಬ ದೇವತೆಯು ಪೂಜ್ಯರಾದ ವಾಲ್ಮೀಕಿಗಳಿಗೆ
ಸರ್ವಪ್ರಕಾರದಿಂದಲೂ ಆಶ್ಚರ್ಯವನ್ನುಂಟುಮಾಡುವ ಎರಡು ಮ
ಕ್ಕಳನ್ನು ಸ್ತನ್ಯತ್ಯಾಗಮಾಡುವ ವಯಸ್ಸಿನಲ್ಲಿಯೇ ತಂದುಕೊ
ಟ್ಟಳು. ಆ ಮಕ್ಕಳು ಮುನಿಗಳಿಗೂ ಅಲ್ಲಿನ ಸಕಲ ಚರಾಚರ
ಭೂತಗಳಿಗೂ ಮನಸ್ಸನ್ನು ಸ್ನೇಹಪಡಿಸುತ್ತಿರುವವು.

ವನದೇವತೆ—ಆ ಮಕ್ಕಳ ಹೆಸರೇನಾದರೂ ತಿಳಿಯುವದೋ.

ತಾಪಸಿ—ಅವರನ್ನು ತಂದುಕೊಟ್ಟ ದೇವತೆಯು ಕುಶಲವರೆಂದು ಅವರ ಹೆಸ
ರನ್ನೂ ಅವರ ಪ್ರಭಾವವನ್ನೂ ಕೂಡ ಹೇಳಿದಳು.

ವನದೇವತೆ—ಅದೆಂಥಾ ಪ್ರಭಾವ ಹೇಳು.

ತಾಪಸಿ—ಅವರಿಗೆ ಹುಟ್ಟುವಾಗಲೇ ರಹಸ್ಯಗಳಾದ ಜೃಂಭಕಾಸ್ತ್ರಗಳು
ಪ್ರಾಪ್ತವಾಗಿರುವವೆಂದು ಹೇಳಿದಳು.

ವನದೇವತೆ—ಇದೀಗ ಆಶ್ಚರ್ಯ. ಆಮೇಲೆ.

ತಾಪಸಿ—ಆ ಮಕ್ಕಳುಗಳನ್ನು ಪೂಜ್ಯರಾದ ವಾಲ್ಮೀಕಿಗಳೇ ಸಾಕಿ ಚೌಲವನ್ನು ಮಾಡಿ ವೇದತ್ರಯ ಹೊರತಾಗಿ ಎಲ್ಲಾ ವಿದ್ಯೆಗಳನ್ನು ಕಲಿಸಿ ಹನ್ನೊಂದನೆಯ ವರ್ಷದಲ್ಲಿ ಉಪನಯನವನ್ನು ಮಾಡಿ ವೇದಾಭ್ಯಾಸವನ್ನು ಮಾಡಿಸಿದರು. ಬಹು ಬುದ್ಧಿಶಾಲಿಗಳಾದ ಆ ಬಾಲಕರೊಡನೆ ನಮ್ಮಂಥಾವರಿಗೆ ಸಹಾಧ್ಯಯನ ಯೋಗ್ಯತೆಯಿಲ್ಲವಾಯಿತು. ಆದ್ದರಿಂದ ಇಲ್ಲಿಗೆ ಬಂದೆನು.

ಕಂ|| ಕಲಿಪ್ರೊಲ್ ಜಾಣಂಗೆ ವಿದ್ಯೆಯ |
ಕಲಿಪಂ ಗುರು ಜಡಗೆ ಬಾರದವನೇಗೈವಂ ||
ತೊಳಗುವ ಮುಕುರಂ ಬಿಂಬವ |
ನೊಳಕೊಂಬಂತೊಳಕೊಳುವುದೆವೆಳ್ಮೃತ್ಪಿಂಡಂ ||

ವನದೇವತೆ—ಇದೆಯೋ ನೀನು ಹೇಳಿದ ವಿಘ್ನ.

ತಾಪಸಿ—ಹೌದು. ಎಲೆ ಭದ್ರೆ ಇನ್ನು ನನಗೆ ಅಗಸ್ತ್ಯಾಶ್ರಮದ ಮಾರ್ಗವನ್ನು ತೋರಿಸು.

ವನದೇವತೆ—ಇತ್ತ ಪಂಚವಟಿಯನ್ನು ಹೊಕ್ಕು ಈ ಗೋದಾವರೀ ತೀರದಿಂದ ಹೋಗಬೇಕು.

ತಾಪಸಿ—ಏನು ಇದು ಪಂಚವಟಿಯೆ? ಇದು ಗೋದಾವರಿಯೆ? ಅಯ್ಯೋ ಜನಸ್ಥಾನದೇವತೆಯಾದ ವಾಸಂತಿಯು ನೀನೆಯೋ.

ವನದೇವತೆ—ಹೌದು.

ತಾಪಸಿ—ಹಾ ವತ್ಸೆ ಜಾನಕಿ ನಿನಗೆ ಪ್ರಿಯಬಂಧುಗಳಾಗಿದ್ದ ಈ ಪದಾರ್ಥಗಳು ನೀನು ನಾಮಶೇಷಳಾದಾಗ್ಯೂ ನಿನ್ನನ್ನು ಪ್ರತ್ಯಕ್ಷ ಕಂಡಂತೆ ಮಾಡುವದಲ .

ವಾಸಂತಿ—(ಸ್ವಗತಂ) ಇದೇನು ನನ್ನ ಪ್ರಿಯಸಖಿಯನ್ನು [illegible]

ಹೇಳುತ್ತಾಳೆ (ಪ್ರಕಾಶ) ಆರ್ಯೆ ಸೀತಾದೇವಿಗೆ ಬಂದ ಭಯವೇನು.

ತಾಪಸಿ—ಬರೀ ಭಯವಲ್ಲ ಅಪವಾದದಿಂದ ಕೂಡಿದ ಭಯ. (ಕಿವಿಯಲ್ಲಿ ಹೇಳುವಳು)

ವನದೇವತೆ—ಅಹ ವಿಧಿವಿಪಾಕವು ಎಷ್ಟು ಕ್ರೂರವಾದದ್ದು. (ಮೂರ್ಛಿಸುವಳು)

ತಾಪಸಿ—ಭದ್ರೆ ಸಂತೈಸಿಕೊ.

ವಾಸಂತಿ—(ಸಂತೈಸಿಕೊಂಡದ್ದು)*

ಹಾ ಪ್ರಿಯಸಖಿ, ಹಾ ಮಹಾಭಾಗ್ಯೆ, ನಿನ್ನ ನಿರ್ಮಾಣಭಾಗ ಪರಿಣಮಿಸಿತೆ? ರಾಮಭದ್ರ ರಾಮಭದ್ರ ಒಂದುವೇಳೆ ನಿನ್ನನ್ನಾ ದಿಕ್ಕಲವೇನು. ಎಲೌ ಆರ್ಯಳೆ ಅರಣ್ಯದಿಂದ ಲಕ್ಷ್ಮಣನು ಹಿಂತಿರುಗಿದ ಮೇಲೆ ಸೀತಾವೃತ್ತಾಂತವನ್ನೇನಾದರು ತಿಳಿದಿರುವೆಯಾ.

ತಾಪಸಿ—ಇಲ್ಲ ಇಲ್ಲ.

ವಾಸಂತಿ—ಹಾ ಕಷ್ಟ ಕಷ್ಟ ರಘುವಂಶ ಜರಿಗೆ ಅರುಂಧತೀ ವಸಿಷ್ಠರು ಗುರುಗಳಾಗಿರುವಾಗ ಮತ್ತು ವೃದ್ಧೆಯರಾದ ಕೌಸಲ್ಯೆ ಮೊದಲಾದ ರಾಣಿಯರು ಬದುಕಿರುವಾಗ ಈ ಕಾರ್ಯನಡೆದದ್ದು ಹ್ಯಾಗೆ?

ತಾಪಸಿ—ಆ ಕಾಲದಲ್ಲಿ ಗುರುಜನಗಳೆಲ್ಲರೂ ಋಷ್ಯಶೃಂಗಾಶ್ರಮದಲ್ಲಿದ್ದರು. ಹೇಗಾದರೋ ಯಾಗಪೂರ್ಣವಾದ ಋಷ್ಯಶೃಂಗರು ಗುರುಜನಗಳೆಲ್ಲರನ್ನೂ ಸತ್ಕರಿಸಿ ಕಳುಹಿಸಿದರು. ಅನಂತರ ಅರುಂಧತಿಯು ಸೀತಾ

---

* ರಾಗ ॥ ॥ ॥

ವನೇಜನೇತ್ರೆ ಪಾವನಾಂಗಿ ಜಾನಕೀ । ಮನೀಷಿಮಾನ್ಯೆ ಪಾಪಿದೈವಕೃತ್ಯಮೇ ನಿದು । ಜನಾಪವಾದ ಪಾತ್ರಳೇನೆ ನೀಂಸಖಿ ॥೧॥ ಕ್ಷಿತೀಶಸೂರ್ಯವಂಶರಕ್ಷ ರಾಮನೇ ಹಾ ಹಾ ಹಾ । ಪತಿವ್ರತಾಶಿರೋಮಣಿ ಯೆನಿಪ್ಪರಾಣಿಯು । ಕೃತಘ್ನ ನೀನದೆಂತುಬಿಟ್ಟೆ, ಕಾಡಿಗೆ ಹಾಹಾಹಾಹಾ ॥೨॥

ವಿರಹಿತವಾದ ಅಯೋಧ್ಯೆಯನ್ನು ಪ್ರವೇಶಿಸುವದಿಲ್ಲವೆಂದು ಹೇಳಿ
ದಳು. ಅದನ್ನೇ ಕೌಸಲ್ಯೆ ಮೊದಲಾದವರೆಲ್ಲರು ಒಪ್ಪಿಕೊಂಡರು.
ಅನಂತರ ವಸಿಷ್ಠರು ಹಾಗಾದರೆ ವಾಲ್ಮೀಕಿಗಳ ಆಶ್ರಮಕ್ಕೆ ಹೋ
ಗೋಣವೆಂದು ಹೇಳಿದರು.

ವಾಸಂತಿ—ಆಯಿತು. ಈಗ ಆ ರಾಮಭದ್ರ ಏನು ಮಾಡುತ್ತಿರುವನು. ?

ತಾಪಸಿ—ಆ ರಾಮನು ಈಗ ಅಶ್ವಮೇಧಕ್ಕೆ ಉಪಕ್ರಮಿಸಿರುವನು.

ವಾಸಂತಿ—ಹಾ ತೆಗೆತೆಗೆ. ಅತನನ್ನು ಪರಿಣಯಮಾಡಿಕೊಂಡವಳಂ ನಿಂದಿಸು.

ತಾಪಸಿ—ಹಾ ! ಹಾ ! ಹಾಗೆನ್ನಬೇಡ.

ವಾಸಂತಿ—ಹಾಗಾದರೆ ಯಜ್ಞದಲ್ಲಿ ಧರ್ಮಪತ್ನಿಯಾವಳು.

ತಾಪಸಿ—ಸುವರ್ಣದಿಂದ ಮಾಡಿದ ಸೀತಾಪ್ರತಿಕೃತಿಯು.

ವಾಸಂತಿ—ಅಹ !

ಕಂ|| ಬಿರಿಸಾದವುವಮವೂ ವ |
ಜ್ರದಿಂದಂ ಮೃದುಗಳಾದವುವು ಕುಸುಮದಿಂದಂ ||
ಪರಿಕಿಸಿನೋಳ್ಪಡೆ ಲೋಕೋ |
ತ್ತರ ಪುರುಷರ ಮನವನಾವನರಿಯಲ್ಬಲ್ಲಂ ||

ಪರಿಕಿಸಿ ನೋಡೆ ಲೋಕೋ
ತ್ತರ ಪುರುಷರ ಮನ
ವನಾವ ನರುವಲ್ಲ
ನು ||

ತಾಪಸಿ—ವಾಮದೇವ ಮುನಿಯಿಂದ ಅಭಿಮಂತ್ರಿತವಾಗಿ ಯಜ್ಞದ ಕುದುರೆ
ಯು ಬಿಡಲ್ಪಟ್ಟಿರುವದು. ಅದರ ಅರೈಕೆಗಾಗಿ ಸೇನಾಸಮೇತನಾಗಿ
ದಿವ್ಯಾಸ್ತ್ರಸಂಪ್ರದಾಯಜ್ಞನಾದ ಚಂದ್ರಕೇತುವೆಂಬ ಲಕ್ಷ್ಮಣ
ಕುಮಾರನು ಕಳುಹಿಸಲ್ಪಟ್ಟಿರುವನು.

ವಾಸಂತಿ—(ಸ್ನೇಹಭಾವದಿಂದ ಕೂಡಿ) ಆ! ಕುಮಾರ ಲಕ್ಷ್ಮಣನಿಗೂ ಮ
ಗನುದಿಸಿರುವನೇ ? ಸಂತೋಷ ಸಂತೋಷ.

ತಾಪಸಿ—ಈ ಮಧ್ಯದಲ್ಲಿ ಒಬ್ಬ ಬ್ರಾಹ್ಮಣನು ಮೃತನಾದ ತನ್ನ ಪುತ್ರನನ್ನು
ಹೊತ್ತುಕೊಂಡು ರಾಜದ್ವಾರದ ಬಳಿಗೆ ಬಂದು ತನ್ನ ಪುತ್ರನನ್ನು ಬದು

ಅನಂತರ ರಾಜನಲ್ಲಿ ಅಧರ್ಮ ಉಂಟಾಗದೆ ಪ್ರಜೆಗಳಿಗೆ ಅಕಾಲ
ಮೃತ್ಯುವು ಸಂಭವಿಸಲಾರದು. ಆದ್ದರಿಂದ ನನ್ನಲ್ಲಿ ಏನೋ ದೋಷ
ವುಂಟಾಯಿತೆಂದು ಶ್ರೀರಾಮನು ಯೋಚಿಸುತ್ತಿರುವಾಗ ಆಕಾಶವಾ
ಣಿಯಾಯಿತು. ಏನೆಂದರೆ

ಕಂ|| ಶಂಬೂಕನೆಂಬ ಶೂದ್ರಂ |
ಕುಂಭಿನಿಯೊಳಗುಗ್ರತಪವನಿರದಾಚರಿಸಂ ||
ನಿಂಬಿಡದವನಂ ಹತಿಸು |
ತ್ತುಂಬದುಕಿಸು ರಾಮಭದ್ರ ಭೂಸುರಸುತನಂ ||

ಎಂಬ ಶಬ್ದವನ್ನು ಕೇಳಿ ಶ್ರೀರಾಮನು ಖಡ್ಗಪಾಣಿಯಾಗಿ ಪುಷ್ಪಕವ
ನ್ನು ಹತ್ತಿ ಎಲ್ಲಾ ದಿಕ್ಕುಗಳಲ್ಲಿಯೂ ಶೂದ್ರತಾಪಸನನ್ನು ಹುಡುಕ
ಲುಪಕ್ರಮಿಸಿರುವನು.

ವಾಸಂತಿ—ಅಕ್ಕೆ ಶಂಬೂಕನೆಂಬ ಶೂದ್ರನು ಈ ಜನಸ್ಥಾನದಲ್ಲೇ ತಪಸ್ಸನ್ನು
ಮಾಡುತ್ತಿರುವನು. ಅದ್ದರಿಂದ ರಾಮಭದ್ರನು ಪುನಃ ಈ ವನವನ್ನು
ಅಲಂಕರಿಸುವನಲ್ಲವೆ.
ಭದ್ರೆ ನಾನು ಹೋಗಿ ಬರುವೆನು. (ಎದ್ದು) ಓಹೋ ಆ ರಾಮಭದ್ರ
ನು ಬಂದೇ ಬಂದನು. (ಇಬ್ಬರೂ ತೆರಳುವರು)

ಶಂಬೂಕಾಶ್ರಮ

(ಖಡ್ಗಪಾಣಿಯಾದ ಶ್ರೀ ರಾಮನ ಪ್ರವೇಶ)

ರಾಮ *

---

ರಾಗ|| ಚಾಲಕ||

ಏಳೆ ದಕ್ಷಿಣಹಸ್ತವೆ ವಿಪ್ರನ ಮಡಿದೆಳೆಕೂಸುಳಿವುದಕೆ | ತಳೆದಿಹ ಖಡ್ಗವಬಿ
ಡು ಶಂಬೂಕನೊಳಳುಕುವದಿನ್ನೇಕೆ || ಬಲುಬಸುರಿಂದಲಿ ಕೊಳ್ಳುವ ಸೀತಾ |
ಲಲನೆಯು ಕಾಡಿಗೆ ಕಳುಹಿದ ರಾಮನ ಕೈಯಲಿ ನೀಂ ದಯೆಯುಳ್ಳಿಯುದೆ ನಿನಗೆ ||

(ಶಂಬೂಕನನ್ನು ಸಂಹರಿಸಿ)

ರಾಮನಿಗೆ ತಕ್ಕಕಾರ್ಯವನ್ನು ಮಾಡಿದ್ದಾಯಿತಷ್ಟೆ. ಇನ್ನು ಆ ಬ್ರಾಹ್ಮಣ ಪುತ್ರನು ಜೀವಿಸಲಿ. (ಶಂಬೂಕನು ಶಾಪವಿಮೋಚನೆಯನ್ನು ಹೊಂದಿ ದಿವ್ಯರೂಪದಲ್ಲಿ ನಿಲ್ಲುವನು)

ಶಂಬೂಕ—ಎಲೈ ಮಹಾರಾಜನೆ ನಿನಗೆ ವಿಜಯವಾಗಲಿ.

ಕಂ|| ಯಮನತ್ತಣಿನಭಯವನಿ |
ತ್ತಮಹಾ ನೀಂಶಿರವನರಿದುಬದುಕಿತುಶಿಶುಮೇಣ್ ||
ಸಮನಿಸಿತೆನಗೀಂಲೇಸು |
ತ್ತಮಸಂಗದೊಳಾದಮೃತಿಯುದಿವ್ಯಪ್ರದುಗತಿಯಂ ||

(ನಮಸ್ಕರಿಸುವನು)

ರಾಮ—ಎಲೈ ಶಂಬೂಕನೆ ಶಿಶುಬದುಕಿದ್ದೂ ನೀನು ಅಭ್ಯುದಯವನ್ನು ಹೊಂದಿದ್ದೂ ಇವೆರಡೂ ಬಹಳ ಪ್ರಿಯವಾದದ್ದು. ಆದ್ದರಿಂದ ನಿನ್ನ ಉಗ್ರತಪಸ್ಸಿಗೆ ತಕ್ಕ ಫಲವನ್ನು ಅನುಭವಿಸು.

ಕಂ|| ಉರತರತಪೋವಿಶೇಷದ |
ವಿರಚನೆ ಬಹುಪುಣ್ಯದಿಂದೆದೊರೆವಾನಂದಂ ||
ಬೆರಸಿದ ತೇಜೋಮಯಪದ |
ಪರಮೇಷ್ಠಿಯಪದದೆ ನೆಲಸುನೀನಾವಗಮುಂ ||

ಶಂಬೂಕ—ಎಲೈ ಮಹಾರಾಜನೆ ಈ ಪದವಿಗೆ ನಿನ್ನ ಅನುಗ್ರಹವೆ ನಿಮಿತ್ತವಲ್ಲದೆ ತಪಃಫಲ ಬೇರೆಅಲ್ಲ. ಒಂದುವೇಳೆ ತಪಸ್ಸೂ ಬಹಳ ಉಪಕಾರವಾಯಿತು.

ಕಂ|| ಅರಸಲ್ಕೆತಕ್ಕಜಗದೀ |
ಶ್ವರ [illegible]ಸುತನ್ನನಿಲ್ಲಿನವರೆಗಂ ||
ಬರೆಗೈದತಪಃಫಲವೇ |

ರಾಮ—ಏನು ಇದು ದಂಡಕಾವನವೇ ? (ಸುತ್ತಲೂ ನೋಡಿ).

ಕಂ|| ಪರಿಪರಿಯಾಗಿಹ ಗಿರಿನದಿ |
ಪೆರಸಿದ ಕಾಂತಾರಸಂತತಿಗಳಿಂ ಸುಮನೋ ||
ಹರಷಗಾಗಿಕಾಲ್ಬಿದಿದೊ ತಾಂ |
ಪರಿಚಿತವಾಗಿರ್ದ ದಂಡಕಾವನವಳಯಂ ||

ಶಂಬೂಕ—ಎಲೈ ಮಹಾರಾಜನೆ ಇದೇ ದಂಡಕಾವನವು. ಇಲ್ಲಿ ನೀವು ವಾಸ ಮಾಡಿಕೊಂಡಿದ್ದಾಗಲೆ ಖರದೂಷಣ ತ್ರಿಶಿರರೆಂಬ ರಾಕ್ಷಸರು ನಿಮ್ಮಿಂದ ಸಂಹೃತರಾದರು. ಆಮೇಲೆ ಈ ಜನಸ್ಥಾನವು ಭಯಶಾಲಿಗಳಾದ ನಮ್ಮಂಥಾವರಿಗೂ ನಿರ್ಭಯ ಸಂಚಾರಕ್ಕೆ ಯೋಗ್ಯವಾಯಿತು.

ರಾಮ—ಇದು ದಂಡಕಾವನ ಮಾತ್ರವೇ ಅಲ್ಲ. ಜನಸ್ಥಾನವೂ ಇದೆಯೋ? (ನೋಡಿ ವ್ಯಸನದಿಂದ) ಇವಲ್ಲವೆ ಪೂರ್ವದಲ್ಲಿ ನಾನು ಕಾಂತಾಸಮೇತನಾಗಿ ವಿಹರಿಸಿದ ಕಾಂತಾರಗಳು. ಹಾ, ಹಾ,

ಕಂ|| ಅರಿಗದಾರ್ಸಿರಿಯುರೆ[illegible]ತಾಂ |
ಧಾರುಣಿಯೊಳವರ್ಗ್ಗನೇನುಮೆಸಗದೊಡವರುಂ |
ಸಾರೆಯೊಳಗಿರ್ದ್ದವಮಾತ್ರದೆ |
ದೂರೀಕರಿಪರ್ ಸಮಸ್ತದುಃಖವನಹಹಾ ||

ಎಲೈ ಶಂಬೂಕನೆ ನಿನಗೆ ಮಾರ್ಗವೆಲ್ಲಾ ಮಂಗಳವಾಗಲಿ ಇನ್ನು ನೀನು ಪುಣ್ಯಲೋಕಗಳನ್ನು ಹೊಂದು ಹೋಗು.

---

ರಾಗ || ಶಹಾಣ || ಆದಿ||

ಸತಿಯುದಿಷ್ಟೆಂತುಸ್ಮರಿಪೆ । ರತಿರೂಪವತಿಯು ॥ ಪ॥ ಇಹಿಯಾಹಿನೊಸ್ಸಿದನೀ । ವನದೊಳು ವಿಹರಿಪೆ । ನೆನೆಪಮಾತ್ರದೆ ಕೋಪಿಸಿಪ ॥೧॥ ಪರಿಸಿಗೆಳ್ಪೋಗಿ ತಾಂ । ಬರಿ ಕಡವಾಗೆ ನಾಂ । ಶಿರುವರಾವಿವೀಕ್ಷಿಪ ॥೨॥ ಅನಿಮಿಷಂಮತ್ಸ್ಯಹಾ।

ಶಂಬೂಕ—ಎಲೈ ಮಹಾರಾಜನೆ ಅಗಸ್ತ್ಯಮುನಿಗಳನ್ನು ನಮಸ್ಕರಿಸಿ ಈಗ

ಲೇ ಬ್ರಹ್ಮಲೋಕವನ್ನು ಪ್ರವೇಶಿಸುವೆನು (ಎಂದು ಹೋದನು).

* ರಾಮ—

ಇದೇ ಆ ಗೋದಾವರೀ ನದಿಯು. ಇದೇ ಆ ಪಂಚವಟಿಯು. ಇವೇ ನನ್ನ ಪ್ರಾಣಪ್ರಿಯೆಯೊಡನೆ ವಿಹರಿಸಿದ ಪ್ರದೇಶಗಳು. ಬಹಳೋ ಪ್ರಿಯಸಖಿಯಾದ ವಾಸಂತಿಯೂ ಇಲ್ಲೇ ಇರುವಳು. ಇವೆಲ್ಲಾ ಅವುಗಳೇ ಆದರೆ ಇವನು ಮಾತ್ರ ಅವನಲ್ಲ. ಅವನೇ ಆಗಿದ್ದಲ್ಲಿ ಅಂಥಾ ಕಾಂತೆಯನ್ನು ಅರಣ್ಯಕ್ಕೆ ಬಿಟ್ಟು ಸೈರಿಸಿಕೊಂಡಿರುವನೆ? ಅಯ್ಯೋ ದುಷ್ಟ ರಾಮನಿಗೆ ಏನುಬಂತು †

ಕಂ|| ಈ ಪಂಚವಟಿಯೊಳಗಡವಿರೆ |
ದೋಷವಳಿ ಕಾಲವನು ಕಳೆದುಕಳೆಕೊಂಡನಿಯುಂ ||
ವಾಸಿಗಡರಾಮನೊರ್ವನೆ |
ವಿಹರಿಯಿಂನೋಳ್ಪನೆಂತು ನೋಡದೆಪೋಪಂ ||

(ರಾಮ) ಇದನ್ನು ಬಿಟ್ಟು ಬಹುದಿವಸವಾದರೂ, ಪಂಚವಟಿಯು ಸ್ನೇಹವು ನನ್ನನ್ನು ಸೆಳೆಯುತ್ತಿರುವುದು.

---

* ರಾಗ || ಪೀಲು ||

ಅಡಲದೇಂ ಪ್ರಿಯೆ । ಗೂಡಿನಾಸಿರ್ದ । ಕಾಡಿರ್ದುದ ಹುನರಮನೋಡಿದೆನಾಹ ||ಪ||
ಸುಸ್ಥಿತಿಯಿಂದಿರ್ದ್ದ । ಹಸ್ತಸುವಾಸ । ಪ್ರಸ್ಥನುವಹಾನಿಲ್ಲಿ । ಸ್ವಸ್ಥನಾಗಿರ್ದನೆ ||೧||
ಬಹುಕಾಲವ್ವನಿಜ । ಮಹಿಳೆಯೊಡನೆ ನಾನೇ । ಗಹನದೆಡೆಯುದದಲಿ । ವಿಹರಿಸಿದೆನೋ ನಾಂ ||೨||

† ರಾಗ || ಜುಂಜೋಟಿ || ಆದಿ ||

ಇದನೆಂತು ಸಾಂಸ್ಥೈರಿಸುವೆನು । ಸುದತೀ । ವಿಯೋಗ । ವೇಗವ || ಪ ||
ಕಟಕಟಪಿಂಪಂಚ । ವಟಿಯನುನೋಡಲ್ಕೆ । ಘಟಿಕೆಯಿತೆಯ ಸ್ಮೃತಿಮನಕೆ ।
ಘಟಿಸುವದೆಂತು ||೧|| ಅರಸಿಯನುತೀಲ । ವರಿಯದ ಜನಂಗ । ತೊರೆದರೆ
ನಾಂ । ತೊರೆವ್ವದೆ ಹಾ ||೨|| ಪರಿಪರಿಯಾಗಿರ್ದ । ಪರಿಚಿತ ವನಾಳಿ ।

ಶಂಬೂಕ—(ಪ್ರವೇಶಿಸಿ) ಮಹಾರಾಜನೆ ಅಗಸ್ತ್ಯ ಮಹರ್ಷಿಗಳು ನನ್ನ ಮುಖದಿಂದ ನಿನ್ನ ಆಗಮನವನ್ನು ಕೇಳಿ ನಿನಗೆ ಹೀಗೆ ಆಜ್ಞಾಪಿಸಿರುವರು. ವಾತ್ಸಲ್ಯಶಾಲಿಯಾದ ಲೋಪಾಮುದ್ರೆಯೂ ಮತ್ತು ಆಶ್ರಮ ನಿವಾಸಿಗಳೂ ನಿನ್ನಾಗಮನವನ್ನೇ ನಿರೀಕ್ಷಿಸುತ್ತಿರುವರು. ಆದ್ದರಿಂದ ಆಶ್ರಮಕ್ಕೆ ಬಂದು ನಮ್ಮನ್ನು ಸಂಭಾವಿಸಿ ಅನಂತರ ಅಶ್ವಮೇಧಕ್ಕೆ ಸಿದ್ಧವಾಗುವದೆಂದು.

ರಾಮ—ಪೂಜ್ಯರು ಅಪ್ಪಣೆ ಕೊಡಿಸಿದಂತೆಯೇ ಆಗಲಿ.

ಶಂಬೂಕ—ಹಾಗಾದರೆ ಪುಷ್ಪಕವನ್ನು ಇತ್ತ ತಿರುಗಿಸಬೇಕು.

* ರಾಮ—ಪೂಜ್ಯವಾದ ಪಂಚವಟಿಯು ಗುರುವಚನದ ನಿರ್ಬಂಧದಿಂದುಂಟಾದ ರಾಮನ ಅತಿಕ್ರಮಣವನ್ನು ಕ್ಷಣಕಾಲ ಕ್ಷಮಿಸು.

ಶಂಬೂಕ—ಎಲೈ ಮಹಾರಾಜನೆ ನೋಡುನೋಡು.

ಕಂ|| ಕುಹರದೆ ಘೂಘೂಕಸುತ್ತಂ |
ಬಹ ಗೋದಾವರಿಯು ಜಲದೆ ಮೆರೆವದ್ರಿಗಳಂ ||
ಅಹಹಾಪರಸ್ಪರಾಹತಿ |
ಬಹುಳತರಕಲ್ಲೋಲವವ ಸರಿತ್ಸಂಗಮನಂ ||

ಎಂದು ಹೋದರು.

→ ದ್ವಿತೀಯಾಂಕ ಸಂಪೂರ್ಣಂ. ←

---

* ರಾಗ || ಸುರುಟಿ || ರೂಪಕ ||

ಪಂಚವಟಿ ಮುನಿನಿಕರನ । ಮುಂಚಿತಮಹಾ ॥ ಪ ॥ ಶರಧಿಯುತರಾಜಮನಗ್ಗೆವ । ಪರಮಮಹಿಮರು । ಬರುವದೆಂದುಹೇಳಿದ । ವರಮುನೀಂದ್ರರು॥ ೧ ಗುರುಜನೋಪದೇಶದೆಗ್ಗೆ । ದಿರುವ ರಾಮನ । ಪರಿದತಿ ಕ್ರಮವನ್ನೆ । ನಿರುಪಿನೀಕ್ಷಣ ॥ ೨ ॥ ಆಗುರುಗಳ ಸನ್ನಿಧಿಗನುರಾಗದಿಂದಲಾಂ । ಪೋಗಿಬರುವೆ

# ಮೂರನೆಯ ಅಂಕ



(ತಮಸೆ ಮುರಳೆ ಎಂಬ ನದಿಗಳ ಪ್ರವೇಶ)

*ತಮಸೆ—ಎಲೌ ಪೂಜ್ಯಳೆ ಅದೇನು ವಿಷಯವನ್ನು ಹೇಳುವುದಕ್ಕೆ ಕಳುಹಿಸಿದಳು.

†ಮುರಳೆ—ನಿನಗೂ ತಿಳಿದಿರುವದಷ್ಟೆ. ಶ್ರೀರಾಮನು ಶಾಂತೆಯನ್ನು ತೊರೆದದ್ದು ಮೊದಲುಗೊಂಡು.

ಕಂ॥ ಅತಿಗಾಂಭೀರ್ಯದಾ ।
ಸ್ಥಿತನಹ ಕತದಿಂದೆ ಬಹಿಃಪ್ರಕಾಶವಲ್ಲದಧೀರತೆಯೋ ॥
ದ್ಧಶರಾಮನ ಶೋಕಭರಂ ।
ಕ್ಷಿತಿಯೊಳ್ಪುಟಪಾಕಶಳಿಕೆಯೆನಿಪ್ಪುದು ಕೇಳ್ ॥

ಆದ್ದರಿಂದ ಇಷ್ಟಜನಕ್ಕೆ ಬಂದ ಕಷ್ಟದಿಂದುಂಟಾದ ದುಃಖಪರಂಪರೆಯಿಂದ ಪರಿಕ್ಷೀಣನಾದ ಆ ರಾಮನು ಈಗ ಅಯೋಧ್ಯೆಯನ್ನು ಕುರಿತು ಹೊರಡುವನು. ಆತನಿಗೆ ಪೂರ್ವದಲ್ಲಿ ಸೀತೆಯೊಡನೆ ವಿಹರಿಸಿದ ಪ್ರದೇಶಗಳನ್ನು ಕಂಡಾಗ ಏನವಸ್ಥೆಯುಂಟಾಗುವದೋ ?

---

* ರಾಗ॥ ಶಂಕರಾಭರಣ॥ ಏಕತಾಳ॥

ತಮಸೆ—ಈಗಳೇತಕೆ ಬಲುಕರಳೆ । ಬಾಗಿಹೆಹೇಳೆನ್ನೊಳುಮುರಳೆ ॥ಪ॥

†ಮುರಳೆ—ಕೇಳೌನಸ್ಸಿರವನು ತಮಸೆ । ಪೇಳುವೆನಾಂನಿರ್ಮಲಸುರಸೆ । ಕಳುಹಿಸಿದಳು ಸದ್ಗುಣಭದ್ರೆ । ಚಂದದೊಳೆನ್ನನು ಲೋಪಾಮುದ್ರೆ ॥೧॥

*ತಮಸೆ—ಎಲ್ಲಿಗೆತಾಂಕಳುಹಿಸಿದಳುನಿನ್ನ । ಸೊಲ್ಲಿಸುನೀನಿಲ್ಲಿಯೆಮುನ್ನ ॥

†ಮುರಳೆ—ಭಾವನೆಯುಳ್ಳವಗೋದಾವರಿಗೆ । ಈವಿಷಯವಪೇಳಲ್ಕೆನಗೆ ॥೨॥

ಳಾಗಿ ನಿನ್ನ ತಂಪಾದ ತರಂಗಗಳಿಂದ ರಾಮಭದ್ರನನ್ನು ಸಂತೈಸು ವರೆಂದು ಹೇಳುವುದಕ್ಕೆ ಕಳುಹಿಸಿದಳು.

ತಮಸೆ—ಸ್ನೇಹಕ್ಕೆ ಸಮಯದಲ್ಲಿ ಅನುಕೂಲಪಡಿಸುವುದೇ ಯುಕ್ತವಾದದ್ದು. ರಾಮಭದ್ರನ ಜೀವನೋಪಾಯವಾದರೋ ಸನ್ನಿಹಿತವೇ ಆಯಿತು.

ಮುರಳೆ—ಅದು ಹ್ಯಾಗೆ.

ತಮಸೆ—ಕೇಳು ವಾಲ್ಮೀಕಿಯ ಆಶ್ರಮದ ಬಳಿ ಬಿಟ್ಟು ಲಕ್ಷ್ಮಣನು ಹಿಂತಿರುಗಿ ಹೋದಮೇಲೆ ಸೀತೆಯು ಪ್ರಸವವೇದನೆಯನ್ನು ಸೈಸಲಾರದೆ ಗಂಗೆಯಲ್ಲಿ ಬಿದ್ದಳು. ಬಿದ್ದ ಕೂಡಲೆ ಅವಳ ಮಕ್ಕಳನ್ನು ಗಂಗೆಯು ಆ ವಾಲ್ಮೀಕಿಗಳಿಗೆ ಸಮರ್ಪಿಸಿದಳು. ಈಗ ಶಂಬೂಕ ವೃತ್ತಾಂತದಿಂದಿಂದ ಜನಸ್ಥಾನಕ್ಕೆ ಬಂದ ರಾಮಭದ್ರನ ಆಗಮನವನ್ನು ಸರಯೂ ನದಿಯ ಮುಖದಿಂದ ಕೇಳಿದ ಭಾಗೀರಥಿಯು ಸೀತಾ ಸಮೇತಳಾಗಿ ಗೋದಾವರಿಯನ್ನು ನೋಡುವುದಕ್ಕೆ ಬಂದಳು.

ಮುರಳೆ—ಪೂಜ್ಯಳಾದ ಭಾಗೀರಥಿಯು ಚನ್ನಾಗಿ ಯೋಚಿಸಿದಳು. ಆದರೆ ಸೀತಾದೇವಿಯು ರಾಮಭದ್ರನನ್ನು ಸಂತೈಸುವುದು ಹ್ಯಾಗೆ.

ತಮಸೆ—ಭಾಗೀರಥಿಯು ಸೀತಾದೇವಿಯನ್ನು ಕುರಿತು ಹೀಗೆ ಹೇಳಿದಳು. ಎಲಾ ವತ್ಸೆ ಈಗಲಾದರೋ ಆಯುಷ್ಮಂತರಾದ ಕುಶಲವರಿಗೆ ದ್ವಾದಶವರ್ಷ ಸಂಖ್ಯಮಂಗಳ ಗ್ರಂಥಿಯು ಕಟ್ಟಲ್ಪಡುವುದಾದ್ದರಿಂದ ಮೂವನಾಗ ಬೇಕಾದ ಸೂರ್ಯನನ್ನು ಸ್ವಹಸ್ತದಿಂದ ಕೊಯ್ದ ಪುಷ್ಪಗಳಿಂದ ಪೂಜಿಸು. ಭೂತಳದಲ್ಲಿ ಸಂಚರಿಸುವ ನಿನ್ನನ್ನು ನನ್ನ ಪ್ರಭಾವದಿಂದ ವನದೇವತೆಗಳೂ ಕೂಡ ಕಾಣದಿರುವರು. ಇನ್ನು ಮನುಷ್ಯರ ಮಾತೇನು. (ಎಂದು ಹೇಳಿದಳು)

ಮುರಳೆ—ನಾನೂ ಕೂಡ ಈ ವೃತ್ತಾಂತವನ್ನು ಲೋಪಾಮುದ್ರೆಗೆ ತಿಳಿಸು
ವೆನು. ರಾಮಭದ್ರನೂ ಕೂಡ ಬಂದೇ ಬಂದನೆಂದು ಊಹಿಸುವೆನು.

*ತಮಸೆ—

ಅದೆನ್ಯ-ಕಂ|| ತೊಟ್ಟಂ ಚಿವುಟಿದ ಚಿಗುರೆನೆ |
ಬಿಟ್ಟಗೆತೋರ್ಪೀಕೆ ಯೊಡಲಸಿಂಘಾನಶೋಕಂ ||
ಸುಟ್ಟಹೃದು ಶರತ್ಸಮಯದೆ |
ಪುಟ್ಟಿದ ಸೆಕೆಸುಡುವ ತೆರದೆ ಕೇದಗೆಯೆಸಳಂ ||

(ಎಂದು ತೆರಳುವರು)

(ಇಂತು ವಿಷ್ಕಂಭವು)

ತೆರೆಯಲ್ಲಿ—ಪ್ರಮಾದವು. ಪ್ರಮಾದವು.

(ಪುಷ್ಪಾವಚಯ ನಿರತೆಯಾದ ಸೀತೆಯು ಕರುಣೆಯೊಡನೆ ಕೇಳುತ್ತಾ
ಪ್ರವೇಶ)

ಸೀತೆ—ಆಃ ನನ್ನ ಪ್ರಿಯಸಖಿಯಾದ ವಾಸಂತಿಯು ಮಾತನಾಡುವಂತಿದೆ.

†ತೆರೆಯಲ್ಲಿ—

ಸೀತೆ—ಆಯಿತು ಅದಕ್ಕೇನು.

§ತೆರೆಯಲ್ಲಿ—

---

* ರಾಗ|| ನಾದನಾಮಕ್ರಿಯ|| ||

ಬರುವಳುಬನಕೆ| ಧರಣೀಕನ್ಯಕೆ| ಕರುಣಾರಸದಕಳಿಕೆ| ವರದಪ್ರೋಲಿಕೆ||ಪ||
ಅಲೋಲಕಬರೀ | ಬಾಲಕೆ ನಿಬರೀ | ಸಾಲಕೆಪಾಂಡುಕಪೋಲಫಲಕೆ ||೧||
ತನುಕಾಂತವಿರಹ | ವ್ಯಥೆಯಂಬೊಲಹಹಾ | ಇನನಗಲಿದಕೋಕಿ | ಗೆಣೆ
ಯಾದಬಾಣಸಿ ||೨||

† ರಾಗ|| ಜಾಲಕ || ||

ಧರಣಿಜೆ ತನ್ನಯ ಕರದೊಳೆಸಲ್ಲಕಿ | ತರುಪಲ್ಲವವಿಕ್ತ್ವ | ಕರಿಕಲಭವನಾಪ್ಪದ
ನಿಗೆ ಪೂರ್ವದಿ ಪರಿಪೋಷಿಸಿದಳೊ ತಾಂ ||೧||

§ ಸರಸಿಯೊಳದುನಿಜ ಕರಿಣಿಯುಕೂಡುತ | ನೆರೆ | ವಿಹರಿಸುತಿರಲು | ಬರು

ಸೀತೆ—(ತ್ವರೆಯಿಂದ ಮುಂದರಿಸುತ್ತ) ಅಯ್ಯೋ ಆರ್ಯಪುತ್ರನೇ ನನ್ನ ...

ರನನ್ನು ರಕ್ಷಿಸು. ರಕ್ಷಿಸು. (ಸ್ಮೃತಿಯನ್ನಭಿನಯಿಸಿ ವ್ಯಾಕುಲೆಯಾಗಿ) ಆಃ ಈಗೀಗ ಮೊದಲು ಪಂಚವಟಿಯಲ್ಲಿ ಆರ್ಯಪುತ್ರನೊಡನೆ ವಿಹರಿಸುತ್ತಿದ್ದಾಗ ಆಡುತ್ತಿದ್ದ ಮಾತುಗಳೇ ಮಂದಭಾಗ್ಯೆಯಾದ ನನ್ನ ಬಾಯಿಂದ ಪ್ರಸಕ್ತ ಹೊರಟವು. ಹಾ ಆರ್ಯಪುತ್ರನೆ (ಎಂದು ಮೂರ್ಛೆಸುವಳು)

ತಮಸೆ—(ಪ್ರವೇಶಿಸಿ) ಎಲೆ ವತ್ಸೆ ಸಂತೈಸಿಕೊ. ಸಂತೈಸಿಕೊ. (ಸಂತೈಸುವಳು).

ತೆರೆಯಲಿ—ಎಲೆ ವಿಮಾನರಾಜನೆ ಇಲ್ಲಿ ನಿಲ್ಲು.

*ಸೀತೆ—(ಕೇಳಿ ಎಚ್ಚತ್ತು)

ತಮಸೆ—ಎಲೆ ವತ್ಸೆ ಇದೇನು? ಗೊತ್ತಿಲ್ಲದ ದನಿಯನ್ನು ಕೇಳಿ ಮೇಘಧ್ವನಿಯನ್ನು ಕೇಳಿದ ನವಿಲಿನಂತೆ ನಲಿಯುವೆ.

†ಸೀತೆ—

ತಮಸೆ—ಇದ್ದೀತು. ಶಂಬೂಕನನ್ನು ದಂಡಿಸುವುದಕ್ಕೋಸ್ಕರ ಇಕ್ಷ್ವಾಕುಕುಲಜನಾದ ಮಹಾರಾಜನು ಜನಸ್ಥಾನದಲ್ಲಿಗೆ ಬಂದಿರುವನೆಂದು ಕೇಳಿರುವೆನು..

---

* ರಾಗ॥ ಬೇಹಾಗ್॥ ಆದಿತಾಳ॥

ಎಲ್ಲಿಂದಲಾಲಿಸುತೀ । ಸೊಲ್ಲಿನದನಿಯು ॥ಪ॥ ನೀರದನುತಾಳಿದ । ನೀರದದನಿಗಂಭೀರನಿಸ್ವನದೋಲ್ ॥೧॥ ಕಿವಿಗೆತಾಂಪೇಳ್ದುದಾ । ತ್ರುವೆನಗಿಂತುಬೇ । ವಸಂತೈಸಿದುದು ॥೨॥

† ರಾಗ॥ ॥

ಆರ್ಯಯುದ್ದೇಶಿಂ । ತಾಡುವೆ ನುಡಿದವ ನಾರ್ಯಪುತ್ರ ನೆಹಾಂ ॥೩॥

ಸೀತೆ—ಆಃ ದೈವಯೋಗದಿಂದ ಆ ಮಹಾರಾಜನ ರಾಜಧರ್ಮಕ್ಕೆ ಕೊರತೆ
ಯುಂಟಾಗಲಿಲ್ಲವಲ್ಲ. ಇದೇ ಬೇಕಾದದ್ದು.

ತೆರೆಯಲ್ಲಿ—ಕಂ|| ತರುಮೃಗಗಳುಂಬಂಧುಗಳಾ |
ಗಿರಲಾವೆಡೆಯಲ್ಲಿ ಕಾಂತೆಯೊಡನಿರ್ದೆನೋನಾಂ ||
ಸುರುಚಿರವಾದಾ ಗೋದಾ |
ವರಿಯುಡೆಯುಸುನಿರ್ಝರಾದ್ರಿತಟಗಳವೆಲ್ತ್ತ ||

* ಸೀತೆ—

ತಮಸೆ—ಎಲೆ ವತ್ಸೆ ಸಂತೈಸಿಕೋ ಸಂತೈಸಿಕೊ.

† ತೆರೆಯಲ್ಲಿ—

ಸೀತೆ—(ಸಂತೈಸಿಕೊಂಡು) ಅಹಾ ಇದೇನಿದು !

§ ತೆರೆಯಲ್ಲಿ—

(ಎಂದು ಮೂರ್ಛೆಗಾಗುವನು)

---

* ರಾಗ || ಚಾಲಕ ||

ಬೆಳಗಿನ ಶಶಿಮಂಡಲಮೆಂಬಂದದಿ ಚಿಕ್ಕದಾಕೃತಿಯಿಂ । ಬಲು ಬಡವಾಗಿರ್ದರು ಗಾಂಭೀರ್ಯವನುಳಿಯದರಿಂದಮೆಶಾಂ || ೧ || ತಿಳಿಯಲ್ಸಾಕ್ಕವನೆನಿಸುತ್ತಲಿ ಕಂ । ಗೊಳಿಪನೆಮತ್ಸತಿಯು । ಮುಳುಗಿದೆಮೋಹಾಂಬುಧಿಯೊಳು ಹಿಡಿಹಿಡಿಚಳಕದೊಳೆನ್ನನು ನೀಂ || ೨ || ( ತಮಸೆಯನ್ನು ತಬ್ಬಿಕೊಂಡು ಮೂರ್ಛಿಸುವಳು ).

† ರಾಗ || ಕಮಾಚು || ರೂಪಕ ||

ಪಂಚವಟೀದರ್ಶನದಿಂ । ಸಂಚಲಿಸಿತು ಮನವೀ || ಪ || ಬಳಗದಗಿರ್ದೆಗೆ ಸಮು । ಜ್ವಲಿಪದುಃಖಶಿಖಿಯು । ಬಲುನೀರೆಯುಂತಿರೆ ಮೋಹಪಿದೊಳಕೊಳುವದು ಬಗೆಯಾ || ೧ ||(ಹಾ ಪ್ರಿಯೆ. ಜಾನಕಿ).

§ ರಾಗ || ಹಿಂದೂಸ್ಥಾನಿ || ಬೇಹಾಗ್ || ಆದಿ ||

ಹಾಹಾಪ್ರಿಯೆ । ವೈದೇಹಿ || ಪ || ಹಾ ದಂಡಕಾವನ । ವಾಸಪ್ರಿಯಸಖಿ ।

‡ ಸೀತೆ—ಹಾಹಾ ಪ್ರಾಣ್ಯಯಿಂದ ತಮಸಾದೇವಿ ಈಯ ಪುತ್ರನನ್ನು ಎಚ್ಚ

ರಿಸು ಬದುಕಿಸು.

(ವಂದಿಸುವಳು).

ತಮಸೆ—ಕಂ|| ಕಣ್ಣೀರಿಯೊಳ್ ನೀನೆಲಾಕ |

ಲ್ಲಾಳೆ ಜಗತ್ಪತಿಯ ನೀನೆಬದುಕಿಸು ನಿನ್ನೀ ||

ಪಾಣಿಸ್ಪರ್ಶದಿ ಬಗೆಯ |

ಲ್ಪಾರೋಪ್ಯಮಲ್ತೆ ನಿನ್ನ ಹಸ್ತಸ್ಪರ್ಶಂ ||

ಸೀತೆ—ಪೂಜ್ಯಳೆ ನೀನು ಹೇಳಿದಹಾಗೆಯೇಆಗಲಿ (ಎಂದು ಹೋಗುವಳು).

(ಸೀತೆಯಿಂದ ಸಂಸ್ಪೃಷ್ಟನಾಗಿ ಉಸಿರುಕೊಂಡಿದ ರಾಮನಪ್ರವೇಶ)

ಸೀತೆ—(ಸ್ವಲ್ಪ ಸಂತೋಷದಿಂದ ಆತ್ಮಗತಂ) ಆಹ! ತ್ರಿಲೋಕಪತಿಯಾದ ನನ್ನ ಪತಿಯ ಜೀವವು ಪುನಃ ಬಂದು ಕೂಡಿಕೊಂಡಂತೆ ತಿಳಿಯುವೆನು.

ರಾಮ—ಆಹ! ಇದೇನು—

ಕಂ|| ಸುರತರು ಪಲ್ಲವರಸವಂ |

ಸುರಿದರೊಚಂದ್ರಮನಹಿಂಡಿಸುಧೆಗರೆದರೊಮೇ ||

ನೆರೆದರೊ ತಪ್ತಸುವನಾ |

ದರಿಸುವ ಸಂಜೀವನೌಷಧಿಯನೆನ್ನರ್ದೆಯೊಳ್ ||

ಕಂ|| ಸಂತಾಪಜನಿತ ಮೂರ್ಛೆಯ |

ಶಾಂತಗೊಳಿಗಿಸುತೆನ್ನನಿಂತುಸಂತೈಸಿದುದಾ ||

ಕಾಂತಾಸ್ಪರ್ಶವೆ ನಿಚ್ಚಯ |

ಮಂತಲ್ಲದೊಡಿಂತು ಮನಕೆ ಸಂತಸವಹುದೇ ||

---

‡ ರಾಗ || ಧನಾಸರಿ || ತ್ರಿಪುಟ ||

ಹಾಹಾಹಾ ಮಂದಭಾಗ್ಯಳಾದೆನ್ನನು । ಹಂಬಲಿಸುತಲಕ್ಕಟ || ಪ|| ನೋಡದ ಮುದ್ರಿತನೇತ್ರ । ನಾಗುತಬೀಳ್ದನು । ಓಹೋ ಭೂಮಿಯುಮೇ | ರೆಗತಿನ

ಸೀತೆ—(ಭಯಕರುಣೆಗಳಿಂದ ಕೂಡಿ) (ಸ್ವಲ್ಪ ಹಿಂಜರಿದು) ಇಷ್ಟಕ್ಕೇ ನಾ
ನೀಗ ಬಹಳ ಹರ್ಷಪಡುವೆನು.

ರಾಮ—(ಕುಳಿತುಕೊಂಡು) ವಾತ್ಸಲ್ಯವುಳ್ಳ ಸೀತಾದೇವಿಯಿಂದ ನಾನು ಸಂ
ತೈಸಲ್ಪಟ್ಟೆನಲ್ಲವೆ.

ಸೀತೆ—ತೆಗೆತೆಗೆ ಆರ್ಯಪುತ್ರನು ನನ್ನನ್ನು ನೋಡುತ್ತಿರುವನು. ಎಲೌ
ಪೂಜ್ಯಳಾದ ತಮಸಾದೇವಿಯೆ ನಡೆನಡೆ ಹೋಗೋಣ. ಆರ್ಯಪುತ್ರನು
ನನ್ನನ್ನು ಕಂಡರೆ ನನ್ನ ಆಜ್ಞೆಯನ್ನು ಪಡೆಯದೆ ಏತಕ್ಕೆ ಬಂದೆ
ಯೆಂದು ನನ್ನಮೇಲೆ ಕೋಪಿಸಿಕೊಂಡಾನು.

ತಮಸೆ—ಎಲೆ ವತ್ಸೆ ಇದೇನು ? ಮರೆತೆಯಾ ? ಭಾಗೀರಥಿಯ ಪರಪ್ರಭಾ
ವದಿಂದ ವನದೇವತೆಗಳಿಗೂ ಕಾಣಿಸಿಕೊಳ್ಳದಿರುವೆಯಲ್ಲವೆ ?

ಸೀತೆ—ಹೌದು ಹೌದು ಮರೆತಿದ್ದೆನು.

*ರಾಮ—

ಸೀತೆ—(ಕೋಪಗದ್ಗದದಿಂದ ಕೂಡಿ) ಆರ್ಯಪುತ್ರನೆ ಈ ಮಾತು ನಿನಗಿನ್ನು
ತಕ್ಕದ್ದಲ್ಲ. (ಕಂಬನಿದುಂಬಿ) ಅಥವಾ ವಜ್ರದಂತೆ ಕಠಿಣಳಾದ
ನಾನು ಜನ್ಮಾಂತರದಲ್ಲಿಯೂ ಕಾಣಲಶಕ್ಯವಾದರೂ ಮಂದಭಾಗ್ಯ
ಳಾದ ನನ್ನನ್ನು ಹಂಬಲಿಸುವ ಆರ್ಯಪುತ್ರನಮೇಲೆ ಯಾತಕ್ಕೆ ನಿರ್ದ
ಯಳಾಗಲಿ. ಈತನ ಹೃದಯವನ್ನು ನಾನು ಬಲ್ಲೆನು. ನನ್ನ ಹೃದಯ
ವನ್ನು ಈತನು ಬಲ್ಲನು.

ರಾಮ—(ಸುತ್ತಲೂ ನೋಡಿ) ಹಾ ಇದೇನು ಯಾರೂ ಇಲ್ಲವಲ್ಲ.

ಸೀತೆ—ಎಲೌ ಪೂಜ್ಯಳಾದ ತಮಸಾದೇವಿಯೆ ನಿಷ್ಕಾರಣವಾಗಿ ನನ್ನನ್ನು

---

* ರಾಗ ॥ ಸಾಮ ॥ ಆದಿ ॥

ಅಹಭೂಮಿಕುಮಾರಿ ॥ ಪ ॥ ಮೋಹ[illegible]ನಿಲಾವಣ್ಯಾಹರಿ । ಅಕಟವೈದೇಹಿ
ಕೋಮಲಾಂಗಿ ॥ ೧ ॥ ದೇವಿ ದಂಡಕಾರಣ್ಯಸವಿಹಾರಿ । ಸುಮುಖಿಮದ್ಗೇಹ

ಬಿಟ್ಟಿದ್ದವನಾದರೂ ಈತನನ್ನು ನೋಡಿ ನನ್ನ ಮನಸ್ಸು ಕರಗಿ [illegible]
ಕಳವಳಪಡುತ್ತಿರುವದು.

ತಮಸೆ—ಎಲೆ ವತ್ಸೆ ನಿನ್ನ ಮನಸ್ಸನ್ನು ನಾನು ಬಲ್ಲೆನು.

ಕಂ|| ಉಳಿದನೆಕಾರಣಮೆನ್ನುತ |
ಮುಳಿದಿರ್ದ್ದೊಡಂ ನಿನ್ನ ಸದಯಮಾದೀ ಹೃದಯಂ ||
ತೊಳಲುತಿರ್ಪ್ಪ ನಿಯುನಪಂ |
ಬ[illegible]ಡನೆ ಕರಗಿ ನೀರಾಯ್ತ್ತೀಗಳ್* ||

*ರಾಮ—

ಸೀತೆ—ಅಹ ಆರ್ಯಪುತ್ರನ ಮಾತುಗಳನ್ನು ಕೇಳಿದ ನನ್ನ ಮನಸ್ಸು ಕರಗಿ
ನೀರಾಯಿತ್ತಲ್ಲಾ.

†ರಾಮ—

ತೆರೆಯಲ್ಲಿ ರಾಗ|| ಧರಣಿಜಿತನಯಾ (ಪೂರ್ವೋಕ್ತವಾಗಿಹೇಳುವುದು)

ರಾಮ—(ಕರುಣ ಕಳವಳದಿಂದ) ಆ ವತ್ಸನಿಗೆ ಏನಾಯಿತು

ತೆರೆಯಲ್ಲಿ—ರಾಗ|| ಸರಸಿಯೊಳಿದುನಿಜ (ಪೂರ್ವದಂತೆಯೆ)

ಸೀತೆ—ಈ ದುಷ್ಟಗಜವನ್ನಾಕ್ರಮಿಸುವರ್ಯಾರೂ ಇಲ್ಲವಲ್ಲಾ.

ರಾಮ—ನನ್ನ ಪ್ರಿಯಳ ಪುತ್ರನನ್ನು ಆಕ್ರಮಿಸುವ ದುಷ್ಟ ಗಜವೆಲ್ಲಿ ಯೆಲ್ಲಿ
(ಏಳುವನು)

‡ವಾಸಂತಿ—(ಸಂಭ್ರಾಂತಳಾಗಿ ಪ್ರವೇಶಿಸಿ) ಇದೇನು ಪೂಜ್ಯನಾದ ರಘುಪತಿಯು ಇಲ್ಲಿರುವನು.

---

* ರಾಗ || ಧನಾಸರಿ ||

ಎಲ್ಲಿರುವೇವಲ್ಲಭಿನಿ || ಪ || ದೇವಿಯೆನಿನ್ನಕ್ಕೈ | ದಾವರಿಸೋಕೆನ್ನ | ಜೀವವ ಕಂಪಿಪುದೀಗಳ || ೧ ||

† ರಾಗ.

ಎಲ್ಲಿನಿಯುಳು ನಾ | ನೆಲ್ಲಿ ಮನೋಭ್ರಮೆ | ಯಿಲ್ಲದೆರಾಮಭದ್ರನು || ಅ || ಅಗಳು ನಿನ್ನನಾಂ | ಕೂಗುವಭ್ಯಾಸವು ಹೀಗಳು ಕೂಗಿದೆ ನಲ್ಲದೆ || ೩ ||

‡ ರಾಗ || ಮುಖಾರಿ || ಆದಿತಾಳ ||

ಬಂದುನಿಂದ ಪೂರ್ಣಕಾಮಂ | ಸುಂದರಾಂಗ ರಾಮಂ || ಪ || ಕಂದಳಿಸಗು

ಸೀತೆ—ಇದೇನು ನನ್ನ ಪ್ರಿಯಸಖಿಯಾದ ವಾಸಂತಿ ಬಂದಳು.

ವಾಸಂತಿ—ಎಲೈ ಪೂಜ್ಯನೆ ನಿನಗೆ ಜಯವಾಗಲಿ.

ರಾಮ—(ಚೆನ್ನಾಗಿ ನೋಡಿ) ಓಹೋ! ದೇವಿಗೆ ಪ್ರಿಯಸಖಿಯಾದ ವಾಸಂತಿ ಇವಳು

ವಾಸಂತಿ—ಆರ್ಯನೆ ನಡೆನಡೆ ದೇವಿಗೆ ಪುತ್ರಪ್ರಾಯವಾದ ಮರಿಯಾನೆಯನ್ನು ಸಂಭಾವಿಸುವೆ.

(ರಾಮನೂ, ಸೀತೆಯೂ, ತಮಸೆಯೂ ಹೊರಡುವರು)

ವಾಸಂತಿ—(ತೋರಿಸಿ) ಆರ್ಯನೆ ಜಯಶಾಲಿಯಾಗಿ ದೇವಿಯ ಮರಿಯಾನೆಯನ್ನು ನೋಡಿ ಸಂತೋಷಪಡುವನಾಗು.

ರಾಮ—ಎಲೈ ಆಯುಷ್ಮಂತನೆ ವಿಜಯಿಯಾಗು. ಎಲೆ ದೇವಿ ದೈವಯೋಗದಿಂದ ವರ್ಧಿಸುವೆಯಾ.

ಕಂ|| ಬಲನೆನಿಜಕರ್ಣಪೂರೋ |
ತ್ಪಲಮಂ ಮೊಳೆವಲ್ಲೊಳೆವ ನಿನ್ನೀಪುತ್ರಂ ||
ಗೆಲಿದು ಮದಕರಿಗಳಂ ತೇ |
ನ್ನೊಳೆವರೆಯೊಕ್ಕ ತಕ್ಕ ಕಾರ್ಯಕಳೆಯನಾದುದುಕಾಂ ||

ಸೀತೆ—ಎಲೌ ಪೂಜ್ಯೆಯಾದ ತಮಸಾದೇವಿಯೆ ಇದಂತೂ ಹೀಗಾಯಿತು. ಕುಶಲವರು ಈವರೆಗೆ ಹ್ಯಾಗಾಗಿರುವರೋ ಕಾಣೆ.

ತಮಸೆ—ಇವರಂತೆಯೆ ಅವರೂ ಕೂಡ ಬೆಳವಣಿಗೆಯನ್ನು ಹೊಂದಿ ಶೋಭಿಸುತ್ತಿರುವರು.

---

ವಾಸಮೇತಂ। ಸೂಸಲೀಪ್ರಸೂನಜಾತಂ। ಸೌಸವಂಗಳಂತಿರಾಂ || ೨ || ಫಿಡ ಲಿನ್ನ ವೃಕ್ಷಜಾಲಂ। ನಾಡೆನಿಜಫಲಂಗಳಂ। ಆಡಲೇನಿದೇಸುಕಾಲಂ। ವಾ

* ಸೀತೆ—

ತಮಸೆ—ಎಲೈ ವತ್ಸೆ ನಾವು ಪಡೆದವ್ವನ್ನು ಯಾರಿಗೆ ಕೊಡೋಣ ಹೇಳು.

† ಸೀತೆ—

ತಮಸೆ—ಎಲೈ ವತ್ಸೆ ದೇವತಾನುಗ್ರಹದಿಂದ ನಿನ್ನ ಕೋರಿಕೆ ಸಿದ್ಧಿಸಲಿ.

ಸೀತೆ—ಎಲೌ ತಮಸಾದೇವಿಯೆ ಈ ಪುತ್ರಸ್ಮರಣೆಯಿಂದ ಎದೆ ತೊರೆದು ಸುರಿವ ಸ್ತನ್ಯದಿಂದ ಕೂಡಿ ಪುತ್ರವಂತನಾದ ಪತಿಯ ಸನ್ನಿಧಿಯನ್ನು ಹೊಂದಿ ಕ್ಷಣಮಾತ್ರ ನಾನು ಸಂಸಾರಿಯಾದೆನು

ತಮಸೆ—ಈ ವಿಷಯದಲ್ಲಿ ಹೇಳತಕ್ಕದ್ದೇನು ಮಕ್ಕಳಲ್ಲವೆ ಮನಸ್ಸನ್ನು ಸೆಳೆಯತಕ್ಕವರು.

ಕಂ॥ ಬಿಡದವಿದನುರಾಗ ಸಂಬಂ |
ಧದೆ ದಂಪತಿಗಳ ಮನಕ್ಕೆ ಮಕ್ಕಳೆತಾಂ ಸ್ನೇ ॥
ಹದ ಗಂಟು ಪೇಳ್ವುದೇ ನಿ |
ನ್ನದು ತಾಂ ಸಲೆಬಂಧಿಸಿರ್ಪುದವನೀತಲದೊಳ್ ॥

ವಾಸಂತಿ—ಆರ್ಯಳೆ ಇತ್ತನೋಡಬೇಕು.

---

* ರಾಗ ॥ ಭೈರವಿ ॥ ತ್ರಿಪುಟ ॥

ಅಹಾ ತಮಸೆ ಆಳಲ ನೈಸೆ ॥ ಪ ॥ ದೇಹವೆತ್ತಲಿಹದನ್ನೈಸೆ ॥ ಅ ॥ ಪತಿಯನ್ನಗಲಿ । ಸುತರನ್ನಗಲಿ । ಕ್ಷಿತಿಯೊಳ್ಳಿರಲೇಂ । ಹತಭಾಗ್ಯಳುನಾಂ ॥ ೧ ॥ ಹಾಹಾಯೆನ್ನಂದದಸ್ತ್ರೀಜನರು । ಇಹರೇನಿಳೆಯೊಳ್ । ಬಹುಪಾತಕಿನಾಂ ॥ ೨ ॥

† ರಾಗ ॥ ನಾದನಾಮಕ್ರಿಯ ॥

ಫಲವೇನುಪಡೆದುಮಕ್ಕಳನಾನು ॥ ಪ ॥ ಸ್ಮಿತಮುಖರಂದಾ ಸ್ಮಿತರಾದೆನ್ನಯ । ಸುತರಾಸ್ಯಕಮಲವ । ಪತಿಚುಂಬಿಸದಮೇಲೆ ॥ ೧ ॥ ಕಿವಿನಿಂಪುಗರೆದೆನ್ನ । ಕುವರರ್ಕಳಾಡುವ । ಸವಿಮಾತುಗಳನಾತ್ಮ । ಧವನುಕೇಳದಮೇಲೆ ॥ ೨ ॥ ದಟ್ಟಡಿಯಿಕ್ಕುವ । ಪುಟ್ಟಮಕ್ಕಳನೆನ್ನ । ಪಟ್ಟದರಸುಕ । ಣ್ಗೆಟ್ಟಿನೋಡದ ಮೇಲೆ ॥ ೩ ॥

ಕಂ|| ಕುಣಿಕುಣಿದು ಕಾಲಕೊನೆಯೊಳ್ |
ಮಣಿಮಕುಟದೊಳೆಸೆವನೆಗೆದ ಸಿಖಿನಿಗೆದರು ||
ತ್ರಿಣಿಮುರದಿಂದೆ ಕದಂಬದೆ |
ಗೆಣೆಯಳ್ ಕೂಡುತ್ತ ಕೇಕಿಯಿದೋ ಕೂಗಿಡಿಗುಂ ||

ಸೀತೆ—(ಕಣ್ಣೀರಿಂದ ಕೂಡಿ) ಇದೇ ಆ ನನ್ನ ನವಿಲು.

ರಾಮ—ಎಲೈ ವತ್ಸನೆ ಸಂತೋಷಪಡು ಸಂತೋಷಪಡು.

ಕಂ|| ಲೋಲಾಕ್ಷಿಯು ಕರಕಿಸಲಯು |
ತಾಳಕೆ ಸರಿಯಾಗಿ ಕುಣಿಯುತ್ತಿರ್ದಾ ನಿನ್ನಂ ||
ತಾಳದವಾತ್ಸಲ್ಯದಿ ನಿಜ |
ಬಾಲನವೊಲ್ ಸ್ಮರಿಪೆನಾಂ ಮಯೂರನೆ ಮನದೊಳ್ ||

ಆಹ ತಿರ್ಯಗ್ಜಾತಿಯೂ ಕೂಡ ಪೂರ್ವ ಪರಿಚಯವನ್ನು ಮರೆಯದಿರುವುದಲ್ಲ.

ಕಂ|| ಅರಸಿ ಬೆಳಸಿದುದೆನುತ್ತಂ |
ಪಿರಿದಾದಭಿಮಾನದಿಂದೆ ದೇವಿಯ ನವಿಲೀ ||
ಪರಿಯಂ ಕದಂಬತರುವೊಳ್ |
ಚರಿಸಂಬಡುತಿರ್ಪ್ಪ ದಹಜ ನೆನಪ್ಪುದಕೆಂತೋ ||

ಸೀತೆ—ಆರ್ಯಪುತ್ರನು ಚೆನ್ನಾಗಿ ಸ್ಮರಿಸಿಕೊಂಡನು.

ವಾಸಂತಿ—ಆರ್ಯನೆ ಇಲ್ಲಿ ಕುಳಿತುಕೊಳ್ಳಬೇಕು. ಇದೋ ನೀನು ಕಾಂತೆಯೊಡನೆ ಶಯನಿಸಿದ ಕದಳೀವನ ಮಧ್ಯದ ಶಿಲಾತಲವು.

ರಾಮ—ಇಲ್ಲಿವರೆಗೂ ನೋಡಿದೆನು. ಇದನ್ನಂತೂ ನೋಡುವುದೇ ಕಷ್ಟ.

ಸೀತೆ—ಎಲೆ ಸಖಿ ವಾಸಂತಿ ನನಗೂ ಆರ್ಯಪುತ್ರನಿಗೂ ಇದನ್ನು ತೋರಿಸುವುದರಿಂದ ಏನುಮಾಡಿದಹಾಗಾಯಿತು. ಆಹಾ ತೆಗೆತೆಗೆ ಅವನೆ ಆರ್ಯ

ಅವೆ ಅಮೃತಪಾನಮಾಡಿದ ಮೃಗಪಕ್ಷಿಗಳು. ಇವೆಲ್ಲವೂ ನೋಡು

ತ್ತಿದ್ದರೂ ಮಂದಭಾಗ್ಯೆಯಳ ಭಾಗಕ್ಕೆ ಯಾವುದೂ ಅಲ್ಲವಾಗಿರು

ವುದು. ಆಃ ಲೋಕದ ನಡವಳಿಕೆಯು ಎಂಥಾದ್ದು.

ವಾಸಂತಿ—ಎಲೆ ಸಖಿ ಸೀತೆ ರಾಮನ ಅವಸ್ಥೆಯನ್ನು ನೋಡಿದೆಯಾ.

ಕಂ॥ ಕನ್ನೈದಿಲೆಗಳನ್ನೋಲುವ ।
ತನ್ನಂಗದೆ ನಿನ್ನಕಣ್ಗೆ ನಲವಿತ್ತರಸಂ ॥
ಬನ್ನದೆಬಡವಾದೊಡಮೋ
ಮೇನು ಕೃಶಿಸಲ್ತು ಕಣ್ಗೆ ನವನೆ ನಿಜವೊಸುತಿರ್ಪಂ ॥

*ಸೀತೆ—ಎಲೆ ಸಖಿ ನೋಡುವೆನು ನೋಡುವೆನು.

ತಮಸೆ—ಕಂ॥ ಬಾಳಿಭವದೀಯವಿರಹ ।
ಜ್ವಾಲಾಪರಿತಪ್ತನಾದ ಹೃದಯೇಶನನಿಂ ॥
ದೋಲಾಯಿಸುವುದು ಪೆಂಪಿನ ।
ಕಾಲುವೆಯುಂ ಪೋಲ್ವ ನಿನ್ನ ನೇಹದ ನೋಟಂ ॥

ರಾಮ—ಬಾ ಸಖಿ ವಾಸಂತಿ ಬಾ ಇಲ್ಲಿ ಕುಳತುಕೊ.

ವಾಸಂತಿ—(ಕುಳಿತು) ಎಲೈ ಮಹಾರಾಜನೆ ಕುಮಾರ ಲಕ್ಷ್ಮಣನು ಕ್ಷೇಮ

ದಲ್ಲಿರುವನೆ ?

ರಾಮ—(ಕೇಳದವನಂತೆ)

---

* ರಾಗ ॥ ಅಸಾವೇರಿ ॥

ಹಾಹಾದಯಾಕರನೆನ್ನವೇ ದೈವವೆ ॥ ಪ ॥ ಆತನೆನ್ನನುಬಿಟ್ಟು । ಏಕಾಕಿನಿನಾಂ ಬಿಟ್ಟು । ವಿಷಾತಿರವಿರಹವೆಂಬ । ರೀತಿಯನಾಂಬಲ್ಲೆನೆ ಹಾಹಾ ॥ ೧ ॥ ಅರೆನಿಮಿಷವುಮೆ । ಸ್ಮರಸನನಾಂಕಾಣೆ । ದಿರೆಯುಗವಾದಂತೆ ನರಿಯುವೆನಲ್ಲಾ ॥ ೨ ॥ ಕಡುನೇಹವುಳ್ಳ । ನ್ನೊಡೆಯನಕಣ್ಣೀರ । ನಡುವೆನೋಡುವೆನಾಗೆ ।

ಕಂ|| ಎಳೆವುಲ್ಲಂ ತಿಳಿನೀರಂ |

ನಲವಿಂ ಪ್ರಿಯೆ ಕರದೊಳಿತ್ತು ಸಾಕಿದ ಹರಿಣಾ ||

ವಳಿಯದ ನೀಕ್ಷಿಸೆ ಬರ್ಪುದು |

ಶಿಲೆಯುಮನಿರದಹಹ ನೀರವಮಾಡುವದುಃಖಂ ||

ವಾಸಂತಿ—ಮಹಾರಾಜನೆ ಕುಮಾರ ಲಕ್ಷ್ಮಣನ ಕ್ಷೇಮವನ್ನು ಕೇಳುತ್ತೀ
ನಲ್ಲವೆ ?

ರಾಮ—(ಸ್ವಗತ) ಮಹಾರಾಜನೆ ಎಂದು ನನ್ನನ್ನು ಕರೆದದ್ದು ಲಕ್ಷ್ಮಣ
ನಲ್ಲಿ ಮಾತ್ರ ಮರುಕದಿಂದ ಈಕೆ ಕುಶಲಪ್ರಶ್ನೆ ಮಾಡಿದ್ದು ನೋ
ಡಿದರೆ ಸೀತಾ ವೃತ್ತಾಂತವು ಈಕೆಗೆ ತಿಳಿದಿರುವಂತೆ ಕಾಣುತ್ತೆ.
(ಪ್ರಕಾಶ) ಸಖಿ ವಾಸಂತಿ ಕುಮಾರಲಕ್ಷ್ಮಣನು ಕುಶಲಿಯಾಗಿ
ರುವನು.

ವಾಸಂತಿ—(ದುಃಖಿಸಿ) ಮಹಾರಾಜನೆ ಇದೇತಕ್ಕೆ ಇಷ್ಟು ಕ್ರೂರನಾದೆ ?

ಸೀತೆ—ಎಲೆ ಸಖಿ ವಾಸಂತಿಯೆ ಇದೇತಕ್ಕೆ ನೀನು ಹೀಗಾದೆ. ಆರ್ಯಪು
ತ್ರನಲ್ಲಿ ಪ್ರಿಯಸಖಿಯಾದ ನಿನಗೆ ಪ್ರಿಯೋಕ್ತಿಯೆಂಬುವುದು ವಿಶೇ
ಷವಾಗಿರಬೇಕಲ್ಲವೆ.

ವಾಸಂತಿ-ಕಂ|| ನೀನೆನಗೆ ಜೀವಿತಂ ನಯ |

ನಾನಂದಿನಿ ನೀನೆಯೆಂದು ಸವಿನಮಾತುಗಳಂ ||

ದೀನುಮನರಿಯದಳನೆ[illegible]ಯಿಸಿ ||

ನೀನವಳಗೆ || ( ಮುಂದೆಹೇಳುವುದಕ್ಕೆ ಬಾಯಿಬಾರದೆ )

ಹರಹರಾ ಮುಂದಕ್ಕೆ ಹೇಳಿ ಪ್ರಯೋಜನವೇನು.

(ಎಂದು ಮೂರ್ಛಿಸುವಳು)

ರಾಮ—ಎಲೆ ವಾಸಂತಿಯೆ ನೀನು ಹೇಳದೆ ಬಿಟ್ಟದ್ದು ಮೂರ್ಛೆಹೊಂದಿದ್ದು

ವಾಸಂತಿ—(ಸಂತೈಸಿಕೊಂಡು) ಮಹಾರಾಜನೆ, ಏತಕ್ಕಾಗಿ ಈ ಕಾರ್ಯವನ್ನು ಮಾಡಿದೆ?

ಸೀತೆ—ಸಖಿ ವಾಸಂತಿ, ಸುಮ್ಮನಿರು ಸುಮ್ಮನಿರು.

ರಾಮ—ಜನವೊಪ್ಪುವುದಿಲ್ಲವೆಂದು.

ವಾಸಂತಿ—ಜನ ಒಪ್ಪದಿರುವುದಕ್ಕೆ ಕಾರಣವೇನು.

ರಾಮ—ಕಾರಣವನ್ನು ಆ ಜನವೇ ಬಲ್ಲದೇನೋ.

ತಮಸೆ—ಜನವನ್ನು ಮಹಾರಾಜನು ಚೆನ್ನಾಗಿ ನಿಂದಿಸಿದನು.

* ವಾಸಂತಿ

ಸೀತೆ—ಸಖಿ ವಾಸಂತಿ, ಆರ್ಯಪುತ್ರನನ್ನು ಕಠಿಣ ಹೃದಯನೆಂದು ಯಾತಕ್ಕೆ ನಿನ್ನುವೆ. ತಪ್ತನಾದ ಆರ್ಯಪುತ್ರನನ್ನು ಪುನಃ ತಾಪಪಡಿಸುವ ನೀನಲ್ಲವೆ ಕಠಿಣಹೃದಯಳು.

ರಾಮ—ಸಖಿ ವಾಸಂತಿ ಸೀತೆಯ ವಿಷಯದಲ್ಲಿ—†

ಕಂ॥ ಚಕಿತಮೃಗಶಿಶುವಿಲೋಲಾಂ ।
ಬಳಿಯುಚಲದ್ಗರ್ಭಭರದೆಬಳಲುವಳೊಳ ॥
ಸ್ವಕೆಯಸುಕುಮಾರವಾದಂ ।
ನಾಂ
ಗಳವಂಕ್ರೂರಜಂತು ಭಕ್ಷಿಸಿತಕಟಾ ॥

---

* ರಾಗ ॥ ಹಿಂದೂಸ್ಥಾನಿ ॥

ಎಲ್ಲೈ ಕ್ರೂರನೆ ನೀನೆಂತು ಬಿಟ್ಟೆ ಸತಿ । ಕುಲಸ್ತ್ರೀಯಾದಾಕೆಯಂಭೂಪತಿ॥ ವನಕೆಂತು ನೂಕಲ್ಕೆಕೈಬಂದುದು । ವನೇಜಾಕ್ಷಿಯಂ ಮುಂದಕೇನಾದುದು॥ ಧರಾನಾಥ ಪೇಳ್ವಲ್ಲರೆ ನಲ್ಲನೀಂ।ಸರೋಜಾಕ್ಷಿಯ ಸುದ್ದಿಯಂ ಕೇಳ್ವೆನಾಂ॥೩॥

† ರಾಗ ॥ ಘಟಾಕರ್ಣ ॥

ಕಳುಹಿದಮೇಲೆ ಕಾನನಕೇಂ ತಿಳಿಯುತಕ್ಕದ್ದು ॥ ಪ ॥ ಲಲನಾಮಣಿಯಾದ। ಮಹಿಜೆಯು ॥ ಅ । ಪ॥ ಅಕಟಾ ಏಸಜ್ಜನೋನಾಂ । ಗರ್ಭವಾಂತಿಹ ।ಲಲನಾಮಣಿಯಾದ ಮಹೀಜೆಯು ॥ ೧॥ ಈಸುರುವದೇಂ ಕ್ರೂರಮೃಗವಾಸದಲ್ಲಿಗೆ ।

ಸೀತೆ—ಆರ್ಯಪುತ್ರನೆ ಇದೋ ಬದುಕಿರುವೆನು.

* ರಾಮ

ಸೀತೆ—ಅಯ್ಯೋ ತೆಗೆತೆಗೆ ಆರ್ಯಪುತ್ರನು ತೆರೆದು ರೋದಿಸುವನು.

ತಮಸೆ—ದುಃಖವು ದುಃಖಿಸಿದಹೊರತು ಶಾಂತವಾಗದು.

ಆದರೆ ಪ್ರಾಣಿಗಳೀ ಬಹು ಪ್ರಕಾರ ಕಷ್ಟವುಳ್ಳವರು. ರಾಮಭದ್ರನಿಗಾದರೋ ವಿಶೇಷವಾಗಿರುವದು.

ವಾಸಂತಿ—ಎಲೈ ಮಹಾರಾಜನೆ, ವಿಚಾರಿಹೋದಮೇಲೆ ಧೈರ್ಯವನ್ನವಲಂಬಿಸಬೇಕು.

ರಾಮ—ಸಖಿ, ಹ್ಯಾಗೆತಾನೆ ಧೈರ್ಯವನ್ನು ಧರಿಸುವುದಕ್ಕಾದೀತು.

ಕಂ॥ ಆದೇವಿಕಳೆದಜಗಕ್ಕಾ ।
ದುದು ಪನ್ನೆರಡುವತ್ಸರಂಗಳ್ ಬಗೆಯಲ್ ॥
ಪೋದಂತೆ ಸೀತೆಪೆಸರಿಂ ।
ತಾಮುದುಮೆ ರಾಮನಿಂತು ಬದುಕಿಯುಮಿರ್ದಂ ॥

ವಾಸಂತಿ—(ಆತ್ಮಗತಂ) ದುಃಖವಾದರೆ ದುಸ್ಸಹವಾಗಿದೆ. ಆದ್ದರಿಂದ ಈ ಮಹಾರಾಜನ ಮನಸ್ಸನ್ನು ವಿಷಯಾಂತರದಲ್ಲಿ ಎರಗಿಸುವೆನು. (ಪ್ರಕಾಶ) ಎಲೈ ಮಹಾರಾಜನೆ, ಚಿರಪರಿಚಿತಗಳಾದ ಈ ಜನಸ್ಥಾನ ಭಾಗಗಳನ್ನು ನೋಡಬೇಕು.

ರಾಮ—ಹಾಗೆಯೆಆಗಲಿ. (ಎಂದು ಎದ್ದುಬರುವನು)

ಸೀತೆ—ದುಃಖವನ್ನು ಹೆಚ್ಚಿಸುವಸ್ಥಾನಗಳನ್ನು ನನ್ನಸಖಿಯು ದುಃಖಪರಿಹಾರಕಗಳೆಂದು ತಿಳಿದಿರುವಳು.

---

* ರಾಗ ॥ ನಾದನಾಮಕ್ರಿಯ ॥

ಸೀತೆ । ಧರಣಿತನುಜೆ । ವಿನೀತೆ । ಹಾಹಾ । ಪ್ರಿಯನಸಂತಾಪವ ನೋಡಿ ನೀನುಪೇಕ್ಷಿಸೆ । ಪ್ರೇಯಸಿಹಾ ! ಸಂತೈಪೆನದೆಂತೆಹಾಹಾ ॥ ೧ ॥ ತರುಣೀ ಶಿರೋಮಣೀ । ತಾಳೆನಾಂ ತಾಪವಾ । ತಂಪಿಸುಹಾಹಾ । ವಿದೇಹ । ಕುಮಾ

* ವಾಸಂತಿ—

ಸೀತೆ—ಎಲೆಸಖಿ,ನೀನುಬಹುಕ್ರೂರಳು. ಪದೇಪದೇ ಮರ್ಮಚ್ಛೇದಕಗಳಾದ
ಮಾತುಗಳಿಂದ ಆರ್ಯಪುತ್ರನನ್ನು ಏತಕ್ಕಿಂತು ಸಂತಾಪಪಡಿಸುವೆ ?

† ರಾಮ—

(ಎಂದು ಮೂರ್ಛಿಸುವನು)

ಸೀತೆ—ಅಯ್ಯೋ ಆರ್ಯಪುತ್ರನು ಮೂರ್ಛೆಹೊಂದಿದನಲ್ಲಾ !

ವಾಸಂತಿ—ಮಹಾರಾಜನೆ, ಸಂತೈಸಿಕೋ ಸಂತೈಸಿಕೋ.

ಸೀತೆ—ಅಹಾ ಆರ್ಯಪುತ್ರನೆ, ಸಕಲಲೋಕಗಳಿಗೂ ಆಧಾರನಾದನೀನು ಮಂ
ದಭಾಗ್ಯಳಾದ ನನಗಾಗಿ ಪದೇಪದೇ ಇಂಥಾ ಅವಸ್ಥೆಯನ್ನು ಹೊಂದು
ತ್ತಿರುವೆಯಲ್ಲಾ. ಅಹಾ ಕೆಟ್ಟೆನು ಕೆಟ್ಟೆನು. (ಮೂರ್ಛಿಸುವಳು)

ತಮಸೆ—ವತ್ಸೆ ಸಂತೈಸಿಕೋ ಸಂತೈಸಿಕೋ, ಏತಕ್ಕೆ ಕಳವಳಿಸುವೆ? ಪುನಶ್ಚ
ನಿನ್ನ ಹಸ್ತದಿಂದ ರಾಮನನ್ನು ಉಜ್ಜೀವಿಸು.

ವಾಸಂತಿ—ಇದೇನು ಇನ್ನೂ ಮಹಾರಾಜನಿಗೆ ಮೂರ್ಛೆ ತಿಳಿಯಲಿಲ್ಲವಲ್ಲಾ.
ಹಾ ಪ್ರಿಯಸಖಿಯಾದ ಸೀತೆಯೆ ಎಲ್ಲಿರುವೆ? ನಿನ್ನ ಜೀವಿತೇಶ್ವರ
ನನ್ನು ಉಜ್ಜೀವಿಸುಬಾ.

ಸೀತೆ—(ತ್ವರೆಯಿಂದ ಬಂದು ರಾಮನ ಹೃದಯವನ್ನೂ ಲಲಾಟವನ್ನೂ
ಮುಟ್ಟುವಳು).

---

* ರಾಗ ॥

ಮೆರವೀಲವಲೀಮಂಟಪದಲ್ಲಿಯೆ । ನಿರುಕಿಸುತಂಗನೆಯು ॥ ಬರುವನುನೀನಿರೆ
ಗೋದಾ । ತಿರೆಯೊಡೆಚರಿಸುವಹಂಸಗಳ ॥ ೧ ॥ ನೆರೆನೋಡೆಕಡವಾಗಲು
ಬಂದ । ಧರಣಿಜೆಭಯದಿಂದ ॥ ಮರೆಗಿದಳಲೆಮುನಿದಂತಿಹನಿನಗಾ । ಪರಿಕ್ಕೆ
ಜೋಡಿಸುತಂ ॥ ೨ ॥

† ರಾಗ ॥ ಬೇಹಾಗ್ ॥

ಕಲಚಾಂಬಕಿಪ್ರಿಯೆ ಜಾಜಾನಕಿ ॥ ಪ ॥ ಪುಂಡರೀಕಮುಖಿ । ದಂಡಕಾವನ
ಸಖಿ । ಚಂಡಿಯಾಪ್ಸರೇನೇ । ಗಂಡನೊಳಾಹ ॥ ೧ ॥ ಕಾಂತೆಯ ನಿನ್ನನಾಂ

ವಾಸಂತಿ—ಮಹಾರಾಜನು ಪುನಶ್ಚ ಉಜ್ಜೀವಿಸಿದನು.

ರಾಮ—ಕಂ॥ ಒಳಹೊರಗು ದೇಹಧಾತುಗೆ ।

ಬಳಿದು ಸುಧಾರಸವನೆನ್ನ ಸಂತೈಸಿದ ಕೈ ॥

ದಳಿರಿನ ಸೋಂಕಿನಂದದಿ ।

ಬೆಳವಿಗೆಯಂ ಮರಳಿ ನೀಡುವುದು ವ್ಯಾಮರವಂ ॥

( ಆನಂದದಿಂದ ಕಣ್ತೆರೆಯದೆ )

ಸಖಿ ವಾಸಂತಿಯೆ ದೈವಯೋಗದಿಂದ ವರ್ಧಿಸುವೆಯಾ ?

ವಾಸಂತಿ—ಮಹಾರಾಜನೆ ಇದು ಹ್ಯಾಗೆ ಉಜ್ಜೀವಿಸಿದೆ.

ರಾಮ—ಹ್ಯಾಗೇನು ? ಪುನಶ್ಚ ಜಾನಕಿಯು ಬಂದಿದ್ದರಿಂದಲೆ.

ವಾಸಂತಿ—ಅಕೆ ಎಲ್ಲಿರುವಳು.

ರಾಮ—ಇದೋ ನಿನ್ನೆದುರಿಗೆ ಇರುವಳು.

ವಾಸಂತಿ—ಇದೇನು ಬರೀ ಮಾತುಗಳನ್ನಾಡಿ ಪ್ರಿಯಸಖಿಯ ವಿಯೋಗದಿಂದ
ತಪ್ತರಳಾದ ನನ್ನನ್ನು ಮತ್ತೂ ಸಂತಾಪಪಡಿಸುವೆ.

ಸೀತೆ—ಹಿಂಜರಿಯಲಿಚ್ಛಿಸುವೆನು, ಆನಂದವನ್ನುಂಟುಮಾಡುವ ಆರ್ಯಪು
ತ್ರನ ಅಮೃತಲೇಪನದಂತಿರುವ ಅಂಗಸ್ಪರ್ಶನದಿಂದ ನನ್ನ ಹಸ್ತವು
ವಜ್ರಲೇಪನವನ್ನು ಮಾಡಿದಹಾಗೆ ನಿಶ್ಚಲವಾಯಿತು.

ರಾಮ—ಎಲೆ ಸಖಿ ಇದೇತಕ್ಕೆ ಬರೀ ಮಾತೆಂದು ಹೇಳುವೆ.

ಕಂ॥ ಪರಿಣಯಕಾಲದಿನಾಂಪಿಡಿ ।

ಪರಸಿಯಕೈದಳಿರ ಸೋಂಕಿನಾನಂದಮನೇ ॥

ನಡಿಯೆನೆಲವರೀಕಂದಳ ।

ಸುಮಜಿರವಾದಾ ಕರಾಬ್ಜವನೆ ನಾಂ ಪಿಡಿದೇಂ ॥

ಸೀತೆ—ಹಾಹಾ ತೆಗೆ ತೆಗೆ ಆರ್ಯಪುತ್ರನ ಹಸ್ತಸ್ಪರ್ಶದಿಂದ ಪರವಶಳಾದ ನನ
ಗಾದರೋ ಪ್ರಮಾದವುಂಟಾಯಿತು.

ರಾಮ—ಸಖಿ ವಾಸಂತಿ ಆನಂದಾತಿರೇಕದಿಂದ ಪರವಶನಾಗಿರುವೆನು. ಈಕೆ
ಯನ್ನು ನೀನು ಹಿಡಿದುಕೋ.

ವಾಸಂತಿ—ಕಷ್ಟ ಕಷ್ಟ ಇದು ಉನ್ಮಾದವೆ ಸರಿ.

ಸೀತೆ—(ತ್ವರೆಯಿಂದ ಕೈಬಿಡಿಸಿಕೊಳ್ಳುವಳು).

ರಾಮ—ಅಹಾ ತೆಗೆ ತೆಗೆ ಪ್ರಮಾದವಾಯಿತು. ಪ್ರಮಾದವಾಯಿತು.

ಕಂ॥ ನಡುಕಂಜಡತೆಬೆಮರ್ಗಂ |
ಗಡಿಸಿದ ತತ್ಪಾಣಿಪದ್ಮದತ್ತಣಿನಿಂಗಳ್ |
ನಡುಕಂಜಡತೆಬೆಮರ್ಗಂ |
ಗಡಿಸಿದವಮತ್ಪಾಣಿಜಾರಿದತ್ತಕಟೀಂಗಳ್ ॥

ಸೀತೆ—ಆಹಾ ಅದ್ಯಾಪಿ ಆರ್ಯಪುತ್ರನು ತನ್ನನ್ನು ತಾನು ಸಂತೈಸಿಕೊಳ್ಳ
ದಿರುವನು.

ತಮಸೆ—ಎಲೈ ವತ್ಸೆ, ಪ್ರಿಯನ ಹಸ್ತಸ್ಪರ್ಶದಿಂದ ಪುಳಕಾಂಕಿತಳಾದ ನೀನು
ಮೊಗ್ಗುಗಳನ್ನು ಬಿಟ್ಟ ಕದಂಬಲತೆಯಂತೆ ಕಾಣುವೆ.

ಸೀತೆ—(ಸ್ವಗತ) ಓಹೋ ಪೂಜ್ಯಳಾದ ತಮಸೆಯ ಮುಂದೆ ಹಾಸ್ಯಕ್ಕೆ ಗುರಿ
ಯಾದೆನು. ಏತಕ್ಕೆಂದರೆ ನನ್ನ ವಿಷಯದಲ್ಲಿ ಆರ್ಯಪುತ್ರನು ಮಾ
ಡಿದ ಪರಿತ್ಯಾಗಕ್ಕೂ ಪುನಃ ಆತನ ವಿಷಯದಲ್ಲಿ ನನಗಾದ ಅನುರಾ
ಗಾತಿಶಯಕ್ಕೂ ಏನು ತಿಳಿಯುವಳೋ ಎಂದು.

ರಾಮ—(ಸುತ್ತಲೂನೋಡಿ) ಹಾ ಪ್ರಿಯೆಯು ಇಲ್ಲವೆ ಇಲ್ಲ. ಇನ್ನೇನು
ಗತಿ. ಜಾನಕಿ ನೀನು ನಿರ್ದಯಳಲ್ಲವೆ? *

---

* ॥ ರಾಗ ॥ ಕಮಾಚು ॥

*ಪ್ರಾಣಸಖಿ ಯಲ್ಲಿಹೆ ಯನ್ನಾಗೆ ಶಶಿಮುಖಿ। ಕಾಣದೆ ತಲ್ಲಣಿಪೆ ಕಡು। ಜಾಣೆ ಜಾನಕಿ ॥ಪ॥ ತೋರುಪ್ರಿಯೆ ನಿನ್ನಯಮುಖ ವಾರಿಜಾತವ। ನೀರೆನಾ ನಿನ್ನ ಸ್ನೇಹ ಅರಿತಾಪವ ॥೧॥ ಲೋಕಕೃತ್ತಿಗೆಸಗಿದೆನೆಲೆ। ಕೋಕಿಲಾರವೆ। ಸಾಕು ಪೇಳಲೇಂ ಕರವಿಡಿದಾಕೆಭಾರವೆ ॥೨॥ ಲಲನೆ ನೀನೆನ್ನ ಮನವ ತಿಳಿದು ಮುನಿಪ್ಪದೆ। ಚಳಿಸಬಹುದೆ। ಕಾಂತನ ಬಂದುಳುಹಬಾರದೆ ॥೩॥ ಇನ್ನನೀ

ಸೀತೆ—ಆರ್ಯಪುತ್ರನೆ ಇದೇನು ನೀ ಹೇಳುವದು ವಿಪರೀತವಾಗಿದೆ.

ವಾಸಂತಿ—ಮಹಾರಾಜನೆ ಪ್ರಸನ್ನನಾಗು. ಧೈರ್ಯದಿಂದ ನಿನ್ನ ದುಃಖವನ್ನು ನೀನೆ ಸೈರಿಸಿಕೊಳ್ಳಬೇಕಲ್ಲದೆ ದೇವಿಯು ಇಲ್ಲೆಲ್ಲಿರುವಳು.

ರಾಮ—ನಿಜ ದೇವಿಯು ಇಲ್ಲೆಲ್ಲಿರುವಳು. ಅದ್ದಪಕ್ಷದಲ್ಲಿ ವಾಸಂತಿಯಾದರೂ ಕಾಣದಿರುವಳೆ. ಇದೇನು ಸ್ವಪ್ನವಾಗಿದ್ದೀತೆ. ನಾನು ಮಲಗಿರಲಿಲ್ಲ. ಸ್ವಪ್ನವೆಲ್ಲಿಂದ ಬಂದೀತು ಸರ್ವಥಾ ಇವೆಲ್ಲಾ ದೇವಿಯ ವಿಯೋಗಪ್ರಭಾವವಲ್ಲದೆ ಅನ್ಯಥಾ ಅಲ್ಲ.

ವಾಸಂತಿ—ಎಲೈ ಮಹಾರಾಜನೆ ! *

ಸೀತೆ—ಆರ್ಯಪುತ್ರನೆ ತಾತ ಜಟಾಯುವಿನಿಂದ ಬಿಡಲ್ಪಟ್ಟನಾನು ಅಪಹರಿಸಲ್ಪಟ್ಟೆನು.

ರಾಮ—ಆಹಾ ! ತಾತ ಜಟಾಯುವನ್ನು ಕೆಡಹಿ ಸೀತೆಯನ್ನು ಅಪಹರಿಸಿಕೊಂಡುಹೋಗುವ ದುರಾತ್ಮನೆ ಎಲ್ಲಿಗೆ ಹೋಗುವೆ ನಿಲ್ಲು ನಿಲ್ಲು.

ವಾಸಂತಿ—ಮಹಾರಾಜನೆ ! ರಾಕ್ಷಸಕುಲಕ್ಕೆ ಪ್ರಳಯಾಗ್ನಿಯಾದ ನಿನ್ನ ಕೋಪಕ್ಕೆ ವಿಷಯನಾದವನು ಇನ್ನೂ ಬದುಕಿರುವನೆ?

ರಾಮ—ಕಂ ॥ ರಾವಣಹನನಾವಧಿಯಂ ।
ದಾವಿರಹವ ರಣವಿನೋದದಿಂ ತೀರಿಸಿದೆಂ ॥
ದೇವಿಯ ವಿರಹವಿದನವಧಿ ।
ಯಾವಂದದೊಳದನದೆಂತು ಸೈರಿಪ್ಪದಳವಂ ॥

---

॥ ರಾಗ ॥

*ನೋಡು ನೋಡು ನೋಡು । ನಾಯೊಡೆಯನೀ ॥ಪ॥ ಕಾಯಲುಬಂದಜ । ಟಾಯುವ ಮುರಿದು ಬಿ । ಟ್ಟಾಯಸರಥಿಕಳ ರಾವಣನಿದು ॥೧॥ ಧುರದಿ ಜಟಾಯುವ । ಗರಿಯೊಳಗುದುರಿದ । ತುರಗಂಗಳಸ್ಥಿಪಂ । ಜರಗಳಿವು । ಉರಿವ ಸೀತೆಯ ರಥ । ಕರಸಿಕೊಂಡಲ್ಲಿಂದ । ದುರುಳನು ಗಗನಾಂ । ತರಕೆ ನೆಗೆದ

ಸೀತೆ—ಆಹಾ ಇದಕ್ಕೆ ಅವಧಿಯೇ ಇಲ್ಲವೆ. ಹಾ ಕೆಟ್ಟೆನು. (ಎಂದು ರೋ
ದಿಸುವಳು).

ರಾಮ—ಎಲೌ ಸಖಿ ವಾಸಂತಿಯೆ, ಈಗ ರಾಮನ ದರ್ಶನವು ಮಿತ್ರಜನರಿಗೆ
ದುಃಖಕರವಲ್ಲದೆ ಮತ್ತೆ ಬೇರೆಯಿಲ್ಲ. ಎಲ್ಲಿಯವರೆಗೆ ನಿನ್ನನ್ನು
ದುಃಖಪಡಿಸಲಿ. ಆದ್ದರಿಂದ ನಾನು ಹೊರಡುವುದಕ್ಕೆ ಅಜ್ಞೆಯನ್ನು
ಕೊಡು.

ಸೀತೆ—(ಭಯದಿಂದ) ಎಲೌ ಪೂಜ್ಯೆಯೆ, ಆರ್ಯಪುತ್ರನು ಹೋಗುವಂತಿದೆ.
ಇನ್ನು ಹ್ಯಾಗೆ ಮಾಡಲಿ. (ತಬ್ಬಿಕೊಂಡು ರೋದಿಸುವಳು).

ತಮಸೆ—ವತ್ಸೆ, ಸಂತೈಸಿಕೊ. ಸಂತೈಸಿಕೊ. ನಾವೂ ಕೂಡ ಚಿರಂಜೀವಿಗ
ಳಾದ ಕುಶಲವರ ವರ್ಷಗ್ರಂಥಿ ಮಂಗಳವನ್ನು ಮಾಡುವುದಕ್ಕೆ ಭಾ
ಗೀರಥಿಯಲ್ಲಿಗೆ ಹೋಗೋಣ ನಡೆ.

* ಸೀತೆ—

ವಾಸಂತಿ—ಮಹಾರಾಜನೆ, ಈಗ ನಿನ್ನ ಅಶ್ವಮೇಧದಲ್ಲಿ ಧರ್ಮಪತ್ನಿಯುಂಟೆ.

ರಾಮ—ಉಂಟು.

ಸೀತೆ—(ಭಯದಿಂದ) ಆರ್ಯಪುತ್ರನೆ ಅಕೆ ಯಾರು ?

ರಾಮ—ಸುವರ್ಣದಿಂದ ಮಾಡಿದ ಸೀತಾಪ್ರತಿಕೃತಿಯು.

ಸೀತೆ—ಈಗ ನೀನು ಆರ್ಯಪುತ್ರನಹುದು. ಅಹ! ಈಗಲೀಗ ಆರ್ಯಪುತ್ರನು
ಪರಿತ್ಯಾಗದಿಂದುಂಟಾದ ನನ್ನ ಲಜ್ಜಾಶಲ್ಯವನ್ನು ಕಿತ್ತುಹಾಕಿದನು.

ರಾಮ—ಆ ಸೀತಾಪ್ರತಿಕೃತಿಯನ್ನು ನೋಡಿಕೊಂಡು ಸಮಾಧಾನನಾಗುತ್ತಿ
ರುವೆನು.

---

* ರಾಗ ॥ ಜಂಜೋಟಿ ॥

ನಿಲ್ಲುನಿಲ್ಲು ನಿಮಿಷಮಾತ್ರ ನಿನ್ನ ಬೇಡುವೆ । ಯಲ್ಲಿಯುದುರ್ಲಭನೆನಿಪ್ಪ । ವಲ್ಲ
ಭನನ್ನು ನೋಡುವೆ ॥ ೧ ॥ ಯಂದಿಗಿನ್ನು ನೋಳ್ಪೆ ನೀ ಸುಂದರಾಂಗನ । ಇಂ
ದುವನಿಂದಿಸುವ ವದನದಂದವನಾಂ ॥೨॥ ನೋಡಿಬರುವೆಬರುವೆ ನಿನ್ನೊಂದಿ

ಸೀತೆ—ಆರ್ಯಪುತ್ರನ ಮನೋವಿನೋದಾಸ್ಪದವಾದ ಈ ಪ್ರಕೃತಿಯು ಸುಕೃತಿ
ಯಾದದ್ದು, ಮತ್ತು ಜೀವಲೋಕಕ್ಕೆ ಮಹೋಪಕಾರಿಯಾಯಿತು.

ವಾಸಂತಿ—ಈ ಸಮಾಗಮವು ನಮಗೆ ಅನುಗ್ರಹರೂಪವಾದದ್ದು. ಗಮನ
ವಿಷಯದಲ್ಲಿ ಕಾರ್ಯಹಾನಿಯಾಗದಂತೆ ನಡೆದುಕೊಳ್ಳಬಹುದು.

ಸೀತೆ—ಈಗಲೀಗ ವಾಸಂತಿಯು ನನಗೆ ಪ್ರತಿಕೂಲೆಯಾದಳು.

ತಮಸೆ—ಎಲೆ ವತ್ಸೆ ಬಾ ಹೋಗೋಣ.

ಸೀತೆ—ಆಗಲಿ ಹೋಗೋಣ.

ತಮಸೆ—ಹ್ಯಾಗೆತಾನೆ ಬಂದೀಯೆ ?

ಕಂ || ಪಿರಿದಾಸೆಯಿಂದ ಪತಿಯೊಳ್ |
ಗೆರಕಂಗೊಂಡಿರುವ ದೃಷ್ಟಿಯಂ ಕಪ್ಪಡಿಸೀ ||
ನಿರದೆಳೆದಪೆಬಂ
ಭವದ್ದೃಷ್ಟಿ ಪಥವನಿರ್ಗನ್ನೆವರಂ ||

ಸೀತೆ—ಅಪೂರ್ವ ಪುಣ್ಯದಿಂದ ಕಂಡ ಆರ್ಯಪುತ್ರನ ಚರಣಗಳಿಗೆ ನಮಸ್ಕರಿ
ಸುವೆನು. (ಎಂದು ರೋದಿಸುವಳು).

ತಮಸೆ—ವತ್ಸೆ ಸಂತೈಸಿಕೊ ಸಂತೈಸಿಕೊ.

ಸೀತೆ—ಇಂಥಾ ಅವಸ್ಥೆಯಲ್ಲಿ ಆರ್ಯಪುತ್ರನನ್ನು ನೋಡುವುದಕ್ಕೆ ಎಷ್ಟುತಾನೆ
ಅವಕಾಶ ದೊರಕೀತು.

ರಾಮ—ಎಲೈ ವಿಮಾನರಾಜನೆ ಇತ್ತ ನಡೆ.

(ಎಲ್ಲರೂ ತೆರಳುವರು).

* ವಾಸಂತಿ—

—ಮೂರನೆ ಅಂಕ ಮುಗಿದುದು—

---

* ರಾಗ || ಕಲಹರಪ್ರಿಯ ||

ನಿನಗಾಶೀರ್ವಚಿಸಲಿ | ನಿತ್ಯಸುಮಂಗಳವಾಗಲೆನುತ || ಪ || ಸಕಲಚರಾಚರ
ನಿಕರಧಾರಿಣಿ | ಅಕಳಂಕಗುಣಾಧಿಕೆ ಧಾರಿಣಿ ||೧|| ತುಂಗದುರಿತ ಕುಲ
ಭಂಗದಾಯಿನಿ | ಮಂಗಳದಾಯಿನಿ ಮಂದಾಕಿನಿ ||೨|| ಶ್ರೀ [illegible]ರುಂ

# ನಾಲ್ಕನೆಯ ಅಂಕ.



(ಅನಂತರ ಭಾಂಡಾಯನ ಸೌಧಾತಕಿ ಯೆಂಬ ಋಷಿಪುತ್ರರ ಪ್ರವೇಶ)

* ಭಾಂಡಾಯನ—

ಸೌಧಾತಕಿ—ಇದೋ ನರತಗಣ್ಯದ ಗುರುಜನಗಳು ಬಹುಮಂದಿ ಬಂದಿರುವರು. ಈ ಅನಧ್ಯಯನಕ್ಕೆ ಈಗ ಒಳ್ಳೇ ಕಾಲಸಿಕ್ಕಿತು.

ಭಾಂಡಾ—ಎಲೈ ಸೌಧಾತಕಿ ಗುರುಜನಗಳಲ್ಲಿರುವ ಗೌರವಕಾರಣವಾದದ್ದು ಎಷ್ಟೋ ಇದೆ. ಅದನ್ನೆಲ್ಲಾ ಬಿಟ್ಟು ನರತಗಣ್ಯದವರಮೇಲೆ ದೃಷ್ಟಿ ಬೀಳ್ತಲ್ಲಾ, ಅದ್ದರಿಂದ ನಿನಗೆ ಗಡ್ಡ ಬೆಳ್ಳಗಿದ್ದವರಮೇಲೆ ಪ್ರೀತಿಯೋ.

ಸೌಧಾ—ಅದು ಹಾಗಿರಲಿ ಇವರ್‍ಯಾರು? ಬಹು ದೊಡ್ಡಗಡ್ಡದವರು. ಮುದುಕರಿಗೆಲ್ಲಾ ಮುಖ್ಯರಾಗಿರುವರು. ಇವರ ಹೆಸರೇನು?

ಭಾಂಡಾ—ಛೀ! ನಿನ್ನ ಪರಿಹಾಸವನ್ನು ಬಿಡು. ಇವರಲ್ಲವೆ ವಸಿಷ್ಠಮಹರ್ಷಿಗಳು. ಋಷ್ಯಶೃಂಗಾಶ್ರಮದಿಂದ ಅರುಂಧತಿ ಕೌಸಲ್ಯೆಯರನ್ನು ಕರೆದುಕೊಂಡು ವಾಲ್ಮೀಕಿಗಳ ಸನ್ನಿಧಿಗೆ ಬಂದಿರುವರು.

ಸೌಧಾ—ಅಯ್ಯೋ! ಆತನು ಹುಲಿಯೋ ತೋಳವೋ ಎನ್ನುತ್ತಿದ್ದೆ. ಇವರು ವಸಿಷ್ಠಮಹರ್ಷಿಗಳೆ?

---

* ರಾಗ॥ ಸೋರಟ॥ ಆದಿ॥

ನೋಡುಸೌಧಾತಕಿ ವಾಲ್ಮೀಕಿಯಾಶ್ರಮದೊಳು। ಕೂಡಿದತಿಥಿಜನದ ಸಂಭ್ರಮವನು ॥೧॥ ಮಡದಿಕೂಡಿದುಮಿಕ್ಕ ನೀವಾರಾನ್ನದಕೆನೆಯು ಕುಡಿಯುತಿ

ರ್ಪದಲ್ಲಿ ಶ್ವಶ್ವಸಾರಸಿದರವರಾ ॥೨॥ ಎತ್ತನೋಡಲುತ್ಸವಾಕಾರದಿ

ಭಾಂಡಾ—ಬಿಡುಬಿಡು. ಪೂಜ್ಯರನ್ನು ಪರಿಹಾಸ್ಯಮಾಡಬಾರದು.

ಸೌಧಾ—ಇದೇನವರು ಬಂದಕೂಡಲೇ ಎಳಗರುವನ್ನು ಕೊಯಿಸಿದರಲ್ಲ.

ಭಾಂಡಾ—ಸೌಧಾತಕಿಯೆ ಕೇಳು ? ಅಭ್ಯಾಗತನಾದ ಶ್ರೋತ್ರಿಯನಿಗೆ
ಮಾಂಸಸಮೇತವಾದ ಮಧುಪರ್ಕವನ್ನು ಗೃಹಸ್ಥರು ಕೊಡಬೇ
ಕೆಂದು ಧರ್ಮಶಾಸ್ತ್ರಕಾರರಾದ ಋಷಿಗಳು ಹೇಳುವರು. ಅದ್ದ
ರಿಂದ ಎತ್ತನ್ನಾಗಲಿ ಆಡನ್ನಾಗಲಿ ಬಂದ ಅತಿಥಿಗಳಿಗೆ ಅರ್ಪಿಸಬೇಕು.

ಸೌಧಾ—ಹಾಗೂ ತಿಳಿಯಿತು. ಇನ್ನು ಆಕ್ಷೇಪಣೆಗೆ ಅವಕಾಶವಿಲ್ಲ.

ಭಾಂಡಾ—ಪ್ರಮಾಣವಿರುವದ್ದರಿಂದಲೇ ಬಂದ ವಸಿಷ್ಠಾದಿ ಮಹರ್ಷಿಗಳಿಗೆ
ಎಳಗರುವನ್ನು ನಿವೇದಿಸಿದರು. ಆಗಲೇ ಬಂದಂಥ ಜನಕರಾ
ಜನಿಗೆ ಮಾತ್ರ ಮಾಂಸವಿಲ್ಲದೆ ಮಧುಪರ್ಕವನ್ನು ಕೊಟ್ಟರು.

ಸೌಧಾ—ಅದೇನು ಕಾರಣ.

ಭಾಂಡಾ—ಕೇಳು? ಸೀತಾದೇವಿಗೆ ಬಂದ ಕಷ್ಟವನ್ನು ಕೇಳಿದಾರಭ್ಯ ವೈಖಾ
ನಸವ್ರತವನ್ನು ಹಿಡಿದು ಚಂದ್ರದ್ವೀಪ ತಪೋವನದಲ್ಲಿ ತಪಸ್ಸನ್ನು
ಮಾಡಿದನು. ವ್ರತಕ್ಕಾಗಿ ಜನಕರಾಯನು ಮಾಂಸಭಕ್ಷಣೆಯನ್ನು
ಬಿಟ್ಟಿರುವನು. ಅದ್ದರಿಂದ ಅವನಿಗೆ ಎಳಗರು ದೊರೆಯಲಿಲ್ಲ.

ಸೌಧಾ—ಅಲ್ಲಿಂದ ಇಲ್ಲಿಗೆ ಯಾತಕ್ಕೆ ಬಂದನು.

ಭಾಂಡಾ—ಪುರಾತನ ಸ್ನೇಹಿತರಾದ ವಾಲ್ಮೀಕಿಗಳನ್ನು ನೋಡುವುದಕ್ಕೆ
ಬಂದನು.

ಸೌಧಾ—ಅದರೆ ಈಗ ಜನಕನು ದಶರಥನ ಧರ್ಮಪತ್ನಿಯನ್ನು ಕಂಡನೋ.

ಭಾಂಡಾ—ನೀನೇ ಹೋಗಿ ಜನಕಮಹಾರಾಜನನ್ನು ಕಾಣಬೇಕೆಂದು ಕೌಸ
ಲ್ಯಾದೇವಿಯ ಸಮೀಪಕ್ಕೆ ತಮ್ಮ ಧರ್ಮಪತ್ನಿಯಾದ ಅರುಂಧತಿಯನ್ನು
ಕಳುಹಿಸಿದರು.

ಸೌಧಾ—ಹಾಗಾದರೆ ಈ ವೃದ್ಧರೆಲ್ಲ ಬಿಟ್ಟರೆ [illegible]

ಯ ನಾವುಕೂಡ ಹುಡುಗರೊಡನೆ ಸೇರಿ ಅನಧ್ಯಾಯ ಮಹೋತ್ಸ

ವವನ್ನು ಅನುಭವಿಸೋಣವೆಂದು (ಸ್ವಲ್ಪನಡೆದು)

ಭಾಂಡ—ಇದೋ ರಾಜರ್ಷಿಯಾದ ಜನಕನು ವಸಿಷ್ಠ ವಾಲ್ಮೀಕಿಗಳನ್ನು ಕಂಡು ಉಪಚರಿಸಿ ಈಗ ಆಶ್ರಮದ ಹೊರಗಣ ವೃಕ್ಷಮೂಲದಲ್ಲಿ ಕುಳಿತಿರುವನು.

ಕಂ॥ ಮನದೊಳಗೆಂದುಂ ನೆಲಸಿದ |
ಘನಸೀತಾಶೋಕದಿಂದೆ ತಪಿಸುತ್ತಿರ್ದಂ ||
ಅನಲನನೊಳಕೊಂಡಿಹ ಕಾ |
ನನತರು ತಾಂ ಪ್ರಜ್ವಲಿಸುವ ತೆರದಿಂದೀಗಳ್ ||

(ಎಂದು ಹೋಗುವರು)

(ಅನಂತರ ಜನಕನು ಪ್ರವೇಶಿಸುವನು)

ಹಾವತ್ಸೆ ಗುಣವತಿ ಏನೇನುಮಾಡಿದರೂ ನಿನ್ನ ಸ್ಮೃತಿಯು ನನಗೆ ತಪ್ಪುವದಿಲ್ಲ. ಎಲೌ ಸೀತೆ ದೇವಯಾಗ ಸಂಭೂತಳಾದ ನಿನಗೆ ಇಂಥಾ ಅಪವಾದ ಸಂಭವಿಸಿತೆ? ಅಯ್ಯೋ ಸ್ವಚ್ಛಂದವಾಗಿರೋದನ ಮಾಡುವದಕ್ಕೂ ಲಜ್ಜೆ ಬಾಧಿಸುವದಲ್ಲಾ. ಹಾ ಪುತ್ರಿ

---

* ರಾಗ॥ ತಾಳ॥

ಏನಾರುವರಾರೀ | ಧಾರುಣಿ ಯೊಳಗಹ ಪ್ರಾರಬ್ಧಕರ್ಮವ ನಕಟಾ ॥ ಪ ॥
ಪರಮ ಪಾವನೆಯಾದರು ಮಗಳಿಗೆ ಬಂದ | ದುರಿತವನೀಗಳು ಸ್ಮರಿಸೆ|ಗರಗ
ಸದಂದದಿ ಕೊರೆಯುತ್ತಲಿಹುದುತಾ | ನಿರದೆನ್ನ ಹೃದಯವ ನಹಹಾ ॥ ೧॥
ಜರೆಯುಂದಲು ದುರ್ಧರ ದುಃಖದಿಂದಲು | ವಿರಚಿಸಿದುಪವಾಸಗಳೊಳು |
ಕರಗಿ ನೀರಸವಾದರು ಒಡಲೀಗಳು ಉರುಳ[illegible]ದೇಗೈವೆ ನಕಟಾ ॥ ೨ ॥ ಈ
ತೆರದಳಲತಾನನುಭವಿಸ್ಪುದಕಿಂತ | ಚೈತನ್ಯವ ಬಿಡಲೆಣಿಸೆ | ಪಾತಕವಹು
ದಾತ | [illegible] ಬಾಧಿಪುದೀಗೆವೆ ॥ ೩ ॥

ಕಂ|| ಅನಿಮಿತ್ತ ವಾಂಛನಗುವಿಂ |
ಮಿನುಗುವ ಮೊಗವಲ್ಗಳಿಂದ ತೊದಲ್ಮಾತುಗಳಿಂ ||
ಮನಕೆ ಬಹುತೋಷವಿತ್ತ |
ತನುಜೆಯು ಕೋಮಲ ಮುಖಾಬ್ಜಮಂ ಸ್ಮರಿಸಿದಪೆಂ ||

ತೆರೆಯಲ್ಲಿ ಪೂಜ್ಯರಾದ ಅರುಂಧತಿ ಮಹಾ ದೇವಿಯರೆ ಇತ್ತಿತ್ತ ದಯ ಮಾಡಬೇಕು.

ಜನಕ—(ನೋಡಿ) ಓಹೋ ಪೂಜ್ಯಳಾದ ಅರುಂಧತಿ ಬರುವಳು. ಮಹಾ ದೇವಿ ಎಂದು ಹೇಳಲ್ಪಟ್ಟ ಯಾರನ್ನು (ಚೆನ್ನಾಗಿ ನೋಡಿ) ಅಹ ಈಕೆ ಮಹಾರಾಜ ದಶರಥನ ಧರ್ಮಪತ್ನಿಯಾದ ಕೌಸಲ್ಯೆಯು. ಅಯ್ಯೋ ಈಕೆಯನ್ನು ಆ ಕೌಸಲ್ಯೆ ಎಂದು ಯಾರುತಾನೇ ನಿಶ್ಚಯಿಸುವದಕ್ಕಾದೀತು.

ಕಂ|| ಮೊದಲಿದರ್ಗಳ್ಕೆ ದಶರಥ |
ನರಮನೆಯೊಳ್ ಸಿರಿಯುತೆರದಿ ಉಚಿತಮಾನದೊಳಾಂ ||
ಸಿರಿಯೋ ಇವಳ್ಗೀಕ್ಷಿಸೆ |
ಬೆರಳ್ಗಂತಿರೆತೋರ್ಗಳಹಹ ಹತವಿಧಿವಶದಿಂ ||

ಹಾ! ಗಾಳಿಯಲ್ಲಿ ತೂರಿದಂತೆ ಇಂಥಾ ಕಷ್ಟಕಾಲದಲ್ಲಿ ಇಷ್ಟ ಜನರನ್ನು ಕಾಣುವ ದುರವಸ್ಥೆ ಬೇರೆ ನನಗೆ ಸಂಭವಿಸಿತೆ.

(ಅನಂತರ ಅರುಂಧತಿ, ಕೌಸಲ್ಯೆ, ಕಂಚುಕಿಯರು ಪ್ರವೇಶಿಸುವರು)

ಅರುಂಧತಿ—ಎಲೆ ದೇವಿ ಏತಕ್ಕೆ ಹಿಂತೆಗೆಯುವೆ. ನೀನೇ ಹೋಗಿ ಜನಕನನ್ನು ಕಾಣಬೇಕೆಂದು ನಿಮ್ಮ ಕುಲಗುರುಗಳು ಆಜ್ಞಾಪಿಸಿರುವರಲ್ಲಾ. ಅದಕ್ಕಾಗಿ ನನ್ನನ್ನು ಕಳುಹಿಸಿದರು.

ಕಂಚುಕಿ—ಎಲೌ ಮಹಾದೇವಿಯೆ ಗುರುಗಳ ಆಜ್ಞೆಯನ್ನು ಮನಸ್ಸಿನಾಧಾ

ಕೌಸಲ್ಯೆ—ಇಂಥಾ ಕಾಲದಲ್ಲಿ ಮಿಥಿಲಾಧಿಪನನ್ನು ಹ್ಯಾಗೆ ನೋಡಲಿ. ಅಯ್ಯೋ! ದುಃಖದಮೇಲೆ ದುಃಖ ಸಂಭವಿಸುವದಲ್ಲಾ! ಸೈರಿಸಬಾರದ ದುಃಖವನ್ನು ಹ್ಯಾಗೆತಾನೆ ಸೈರಿಸಲಿ.

ಅರುಂಧತಿ—ಎಲೆ ದೇವಿ, ಅದಕ್ಕೆ ಸಂದೇಹವೇನು ದುಃಖಕಾಲದಲ್ಲಿ ಇಷ್ಟರನ್ನು ಕಂಡರೆ ಮತ್ತೂ ದುಃಖ ಹೆಚ್ಚುವದು.

ಕೌಸಲ್ಯೆ—ವತ್ಸೆಯಾದ ಸೀತೆಗೆ ಇಂಥಾ ಅವಸ್ಥೆಯಾಗಿರುವಾಗ ಈ ರಾಜರ್ಷಿಗೆ ನನ್ನ ಮುಖವನ್ನು ಹ್ಯಾಗೆ ತೋರಿಸಲಿ!

ಅರುಂಧತಿ—ಇದೋ ನಿನಗೆ ಪರಮಬಂಧುವಾದ ಜನಕಮಹಾರಾಜನು.

ಕೌಸಲ್ಯೆ—ಹಾ! ದೈವವೇ!! ಇಂಥಾ ಸಮಯದಲ್ಲಿ ಈತನನ್ನು ಕಾಣುವ ಹಾಗೆ ಮಾಡಿದೆಯಾ!

ಜನಕ—(ಸಮೀಪಕ್ಕೆ ಬಂದು) ಎಲೌ ಪೂಜ್ಯೆಯಾದ ಅರುಂಧತಿಯೆ! ವಿದೇಹಸಂಭವನಾದ ಸೀರಧ್ವಜನು ವಂದಿಸುವನು.

ಅರುಂಧತಿ—ಎಲೈ ಸೀರಧ್ವಜನೆ ನಿನಗೆ ಬ್ರಹ್ಮಜ್ಞಾನಸಿದ್ಧಿಯಾಗಲಿ.

ಜನಕ—ಎಲೌ ಅರ್ಯೆ ಗೃಷ್ಟಿಯೆ, ಪ್ರಜಾಪಾಲಕನ ಮಾತೆಯಾದ ಈಕೆಗೆ ಕುಶಲವೇ.

ಕಂಚುಕಿ—(ಸ್ವಗತ) ಈತನು ನಮ್ಮ ಮಹಾರಾಜನನ್ನು ಚೆನ್ನಾಗಿ ನಿಂದಿಸಿದನು (ಪ್ರಕಾಶವಾಗಿ) ಎಲೈ ರಾಜರ್ಷಿಯೆ ಈ ಕೋಪದಿಂದಲೇ ರಾಮಭದ್ರನ ಮುಖವನ್ನು ನೋಡದೆ ಬಿಟ್ಟಿರುವಳು. ಅದ್ದರಿಂದ ಅತಿ ದುಃಖಿತೆಯಾಗಿರುವ ದೇವಿಯನ್ನು ಮತ್ತೂ ದುಃಖಿಸತಕ್ಕದ್ದಲ್ಲ. ಅಥವಾ ರಾಮಭದ್ರನು ತಾನೇ ಏನುಮಾಡ್ಯಾನು. ಅಗ್ನಿಪರಿಶುದ್ಧೆಯಾಗಿದ್ದರೂ ಸೀತಾದೇವಿಯ ವಿಷಯದಲ್ಲಿ ಲೋಕಕ್ಕೆ ವಿಶ್ವಾಸವುಂಟಾಗದ್ದರಿಂದ ಆ ಲೋಕಾರಾಧನ ವ್ರತಕ್ಕಾಗಿ ರಾಮ

ಜನಕ—ಆಹಾ! ನನ್ನ ಮಗಳ ಪರಿಶೋಧನೆ ಮಾಡುವುದಕ್ಕೆ ಅವನ್ಯಾರು ಅಗ್ನಿ ಎಂಬುವನು. ರಾಮಮಾಡಿದ್ದಕ್ಕೆ ತಕ್ಕದ್ದನ್ನು ನಾನು ಮಾಡುವೆನು.

ಅರುಂಧತಿ—(ನಿಟ್ಟುಸಿರುಬಿಟ್ಟು) ಹಾಗೆಯೇ ಸರಿ. ಸೀತೆಯ ಪಾವನತ್ವದ ಮುಂದೆ ಅಗ್ನಿಯುಮಾತಲ್ಲಿ. ಹಾ ವತ್ಸೆ!

ಕಂ|| ಮಗುವಾದರೇನು ನಿನ್ನಯ |
ಸುಗುಣಂ ಪುಟ್ಟಿಸುವುದೆನಗೆ ಭಕ್ತಿಯ ನಿನ್ನೊಳ್ ||
ಮಗಳೇನು ಶಿಷ್ಯಳೇನೀ |
ಜಗದೊಳ್ ಸದ್ಗುಣಗಳಲ್ತೆ ಪೂಜಾಸ್ಥಾನಂ ||

ಕೌಸಲ್ಯೆ—ಅಯ್ಯೋ! ವೇದನೆ ಹೆಚ್ಚಿತು ನಾನು ಸೈರಿಸಲಾರೆನು. (ಎಂದು ಮೂರ್ಛಿಸುವಳು.)

ಜನಕ—ಹಾ! ಕಷ್ಟ ಇದೇನು.

ಅರುಂಧತಿ—ಆರ್ಯೆ ರಾಜರ್ಷಿಯೆ ಇನ್ನೇನು.

ಕಂ|| ದಶರಥನಾಸೌಖ್ಯವು |
ಮಾದಿನಮಾಶಿಶುಗಳಲ್ಲ ನಿನ್ನಂ ನೋಡ||
ಶ್ರೀದೇವಿಗೆ ನೆನಪಾ |
ಗಿಂತಾದಳ್ ಸ್ತ್ರೀಮನವು ಕುಸುಮಕೋಮಲವಲ್ತೇ ||

ಜನಕ—ಅಹ! ಬಹುಕಾಲಕ್ಕೆ ಕಾಣಿಸಿಕೊಂಡ ನನ್ನ ಪ್ರಿಯಮಿತ್ರನಾದ ದಶರಥನ ಧರ್ಮಪತ್ನಿಯನ್ನು ಚೆನ್ನಾಗಿ ನೋಡಲಾರೆನು.

ಕಂ|| ಅನುಬಂಧಿಯುಚಿತಮಿತ್ರನು |
ಘನವೆನಿಸಿದ ಸುಖವು ನನ್ನ ಜೀವಿತಫಲವುಂ ||
ತನುವೂ ಜೀವವು ನನಗಂ |

ಕಷ್ಟ ಇವಳೇ ಆ ಕೌಸಲ್ಯೆಯು. ಈ ದಂಪತಿಗಳಿಗೆ ಏಕಾಂತದಲ್ಲಿ ಏನಾದರೂ ಮನನೊಸಿಸುಂಟಾದರೆ ನಾನೇ ಇವರನ್ನು ಸಮಾಧಾನ ಪಡಿಸುತ್ತಿದ್ದೆನಲ್ಲ. ಇಬ್ಬರೂ ನನ್ನ ಮಾತಿಗೆ ಪ್ರತ್ಯುತ್ತರವನ್ನು ಹೇಳದವರಲ್ಲ ಅಯ್ಯೋ! ಅದೆಲ್ಲವನ್ನೂ ಸ್ಮರಿಸಿ ಪ್ರಯೋಜನವೇನು! ನನ್ನ ಮನಸ್ಸು ಬಲು ಸಂತಾಪ ಪಡುವದು.

ಅರುಂಧತಿ—ಅಯ್ಯೋ! ದೇವಿಗೆ ಇನ್ನೂ ಮೂರ್ಛೆ ತಿಳಿಯಲಿಲ್ಲವಲ್ಲ,

ಜನಕ—ಹಾ! ಪ್ರಿಯಸಖಿ ಸಂತೈಸಿಕೋ (ಎಂದು ಕಮಂಡಲುಜಲವನ್ನು ಪ್ರೋಕ್ಷಿಸುವನು.)

* ಕೌಸಲ್ಯೆ—(ಮೂರ್ಛೆತಿಳಿದು)

ಕಂ|| ಅವರುಮಕ್ಕಳೊಳಿನ್ನುಮ |
ಜೀವರಗತಿಹಿತನೆನಿಪ್ಪವೋಲ್ ಶ್ರೀರಾಮಂ ||
ಈ ವೈದೇಹಿಯು ಸೊಸೆಯುದೊ |
ಳೀವೇಳ್ದ ಜನಕ[illegible] ಜೀವಕೆಸೆಯಾಗಿರ್ದಳ್ ||

ಜನಕ—ಹಾ! ಪ್ರಿಯಮಿತ್ರನೇ! ಹಾ ದಶರಥಮಹಾರಾಯನೆ! ಹೀಗಿದ್ದರೂ, ಸರ್ವಪ್ರಕಾರದಿಂದ ಹೃದಯಂಗಮನಾದ ನಿನ್ನನ್ನು ಹ್ಯಾಗೆ ಮರೆಯಲಿ.

---

* ರಾಗ ‖ ||

ರಾಮಹಿತೇಸುತೆ ಸೀತೆ ರಾಮದಂಬಿಕೆ ಬಾತೆ ‖ಪ‖ ಕೋಮಲಾಂಗಿ ರಾಜರಾಮನದಯಿತೆ ‖ಅ‖ ಪರಿಣಯೋತ್ಸವಶೋಭಾ । ಕರವೆನಿಸಿದ ನಿನ್ನ । ದರಹಸಿತಾನನ । ಸರಸಿರುಹವನು । ಸ್ಮರಿಸುತ್ತಿನ್ನೆದೆ । ಬಿರಿಯುವದಹಹಾ ‖೧‖ ಅಂಗನಾಮಣಿಯು ಬೆಳ । ದಿಂಗಳನೆರೆಯೊಲ್ಪ । ಅಂಗಗಳಿಂದೆ । ನ್ನಂಕವ ಘನರಪಿ ಸಿಂಗರಿಸೌ । ಸಾರಂಗಸುನಯನೆ ‖೨‖ ಇನಕುಲೋದ್ಭವ ನೃಪರ । ಮನೆಗೆ ತಾಂ ಸೊಸೆಯಾಕೆ । ಜನಕನ ಸಂಬಂಧದೊಳೆನಗುಂ । ಮಗಳೆನು

ಕಂ|| ಅಳಿಯುವ ಪಿತನಂ ಪೂಜಿಪ |
ನೆಲೆಕನ್ಯಾಪಿತನು ಪೂಜಿಸಿದೆ ನೀನೆನ್ನಂ ||
ಅಳಿದೈ ನೀನಿಂಪರಿಯಾವಳಲಿಂ |
ತೊಳಲುವೆದು ತುಳಿದೆನೇಂ ಪಾತಕಿಯೋ ||

ಕೌಸಲ್ಯೆ—ಹಾ ವತ್ಸೆ ಜಾನಕಿ, ಏನುಮಾಡಲಿ? ಹಾಳುಜೀವವು ಮಂದಭಾಗ್ಯಳಾದ ನನ್ನನ್ನು ಬಿಡದಲ್ಲ.

ಅರುಂಧತಿ—ಎಲೆ ರಾಜಪುತ್ರಿಯೆ ಸಂತೈಸಿಕೋ. ಋಷ್ಯಶೃಂಗಾಶ್ರಮದಲ್ಲಿ ನಿಮ್ಮ ಕುಲಗುರುಗಳು ಹೇಳಿದ್ದನ್ನು ಮರೆತೆಯೊ, ಮೊದಲು ಕಷ್ಟವಾಗಿ ಮುಂದೆ ಮಂಗಳ ವುಂಟಾಗುವದೆಂದು ಹೇಳಿದರಲ್ಲವೆ.

ಕೌಸಲ್ಯೆ—ಎಲೌ ಪೂಜ್ಯೆ. ಕೋರಿಕೆಯು ಕೈಮೀರಿಹೋಯಿತಲ್ಲಾ.

ಅರುಂಧತಿ—ಎಲೌ, ರಾಜಪುತ್ರಿಯೆ ಹಾಗೆಣಿಸಬೇಡ.

ಕಂ|| ಧಾರಿಣಿಯೊಳಾತ್ಮಸಾಕ್ಷಾ |
ತ್ಕಾರವಪಡೆದಿರ್ದಮುನಿಗಳಾಡಿದನುಡಿಯೊಳ್ ||
ಬಾರದು ಹುಸಿ ತದ್ವಚನದಿ |
ನೇರಿಪ್ಪುದು ಲಕ್ಷ್ಮಿತಪ್ಪದವರುಕ್ತಿಯು ಕೇಳ್ ||

* ತೆರೆಯಲ್ಲಿ—

(ಎಲ್ಲರೂ ಕೇಳುವರು)

ಜನಕ—ಇದು ಅನಧ್ಯಾಯ ಕಾಲವೆಂದು ಆಡುವ ಹುಡುಗರ ಕೋಲಾಹಲವಲ್ಲವೆ?

ಕೌಸಲ್ಯೆ—ಬಾಲ್ಯವೆ ಸುಲಭಸೌಖ್ಯವುಳ್ಳದ್ದು. (ನೋಡಿ) ಅಹ; ಈ ವಟುಗಳ ಮಧ್ಯದಲ್ಲಿರುವ ಈ ಬಾಲಕನ್ಯಾರು? ರಾಮಭದ್ರನನ್ನು ಪೋಲುವ ತನ್ನ ಚೆಲುವಿಕೆಯಿಂದ ನಮ್ಮ ಕಣ್ಣುಗಳನ್ನು ಆನಂದಪಡಿಸುತ್ತಿರುವನು.

---

* ರಾಗ || ನೋಟು ||

ಅರುಂಧತಿ—( ಮರೆಯಲ್ಲಿ ) ಗಂಗಾದೇವಿ ಹೇಳಿದ ಕರ್ಣಾಮೃತವಾದ
ರಹಸ್ಯ ಇದೇತಾನೆ ? ಆದರೆ ಆಯುಷ್ಮಂತರಾದ ಕುಶಲವರಲ್ಲಿ
ಇವನಾವನೋ ಕಾಣೆ.

* ಜನಕ—

ಕೌಸಲ್ಯೆ—ಈ ಬಾಲಕನು ಕ್ಷತ್ರಿಯಬ್ರಹ್ಮಚಾರಿಯೆಂದು ನನ್ನ ಮನಸ್ಸಿಗೆ
ತೋರುವುದು.

† ಜನಕ—ನೀನೆಂದಹಾಗೆಯೇ ಕಾಣುವುದು.

‡ ಕಂ॥ ಹೊಳೆವುದು ಜನ್ನಿವಳಗಿದೊ ಬ ।
ತ್ತಳಿಕೆಯು ನಡುವಿನೊಳುಂ ಕಾಣುತಿದೆ ಮೌರ್ವೀಮೇ ॥
ಖಲೆಗಳ್ರಾಜಿಸುತಿದೆ ಕರ ।
ದೊಳುಂ ಪಿಪ್ಪಲದಂಡದಂತೆ ಧನುಕೋದಂಡಂ ॥

ಎಲೌ ಪೂಜ್ಯಳೆ ಇವನಾರ ಕುಮಾರನು.

---

* ರಾಗ ॥ ॥ ॥

ಇವನಾವನೊ । ಬಹುಸುಂದರನಾಗಿಹಬಾಲಕನು ॥ಪ॥ ಕುವಲಯದಳವ । ರ್ಣೋಲ್ಲಸತನುಕಾಂತಿಯಿಂ । ನವಜಲಧರಶಾಬದೋಲ್ । ಬಹು ॥೧॥ ತಳೆ ದಶಿಖಂಡದಿಂ । ಚೆಲುವಾದಕದಪಿಂ । ನಲಿಯುವನವಿಲಂದದಿ । ಬಹುಸುಂ ದರ ॥೨॥ ಮುರಳೀತಿಕುತ್ವವಧರಿಸಿದ । ಸುಗುಣಾಕರರಘುವರನಂದದಿ ॥ ಬಹು ॥೩॥ ನಿಪ್ಪಸಿದೆಎಡನೆನ್ನ । ದಿವ್ಯಗಮೃತಾಂಜನ । ವಿಪ್ಪಂಕಿಸಂಕೋಚಿ ಪ ॥ ಬಹುಸಂದರ ॥೪॥

† ರಾಗ ॥ ॥ ॥

ನೆರದಿರ್ದವಟುಗಳನೆರವಿಯುನಿರದಲಿಂ । ಕರಿಸುತನಿಜಕಾಂತಿಯಿಂ । ಬಹುಸುಂ ದರನಾಗಿಹಬಾಲಕನು ॥೧॥

‡ ರಾಗ ॥ ॥ ॥

ಎಸೆವುವೃಬತ್ತಳಿಕೆಗಳಿದಿಣ್ಣೆಳು । ಧನಿತಂದಳಿದಿದೆಯೋಲ್ । ಮಿಸುಗುತ್ತಿ

ಅರುಂಧತಿ—ಎಲೈ ರಾಜರುಷಿಯೆ ಈಗತಾನೇ ವಾಲ್ಮೀಕಿಯಾಶ್ರಮಕ್ಕೆ
ಬಂದ ನಾವು ಈತನ ಸಂಗತಿಯನ್ನು ತಿಳಿಯುವುದು ಹ್ಯಾಗೆ?

ಜನಕ—ಎಲೈ ಕಂಚುಕಿಯೆ ನನಗಾದರೆ ಬಹು ಕುತೂಹಲವುಂಟಾಗಿರು
ವುದು ಆದ್ದರಿಂದ ಪೂಜ್ಯರಾದ ವಾಲ್ಮೀಕಿಗಳನ್ನು ಕುರಿತು ಯಾರೋ
ಕೆಲವರು ವೃದ್ಧರು ಈ ಬಾಲಕನ್ಯಾರೆಂದು ಕೇಳಿ ತಮ್ಮದರ್ಶನ
ವನ್ನು ಅಪೇಕ್ಷಿಸುತ್ತಿರುವರೆಂದು ಹೇಳು.

ಕಂಚುಕಿ—ಆಜ್ಞೆಯಾದಂತಾಗಲಿ (ಎಂದು ಹೋಗುವನು)

ಕೌಸಲ್ಯೆ—( ನೋಡಿ ) ಇದೋ ಕಂಚುಕಿಯ ವಚನವನ್ನು ಕೇಳಿದೊಡನೆ
ಮುನಿಕುಮಾರರನ್ನು ಬಿಟ್ಟು ವಿನಯಪೂರ್ವಕವಾಗಿ ಆ ಬಾಲಕನು
ನಮಗೆ ಅಭಿಮುಖವಾಗಿ ಬರುವನು.

ಜನಕ—ಚೆನ್ನಾಗಿ ನೋಡಿ ಆಹಾ! ಇದೇನಾಶ್ಚರ್ಯ.

ಕಂ॥ ಇವನೋಳ್ಪನಯಶಿಶುತ್ವಂ ।
ಕವಿದೀಮಹಿಮಾತಿಶಯರಭಿಜ್ಞಗೆತಿಳಿಗುಂ ॥
ಅವಲೋಕನ ಸುಖಮಿರದೆ ।
ನ್ನವನೆಳೆಗುಂ ಸೂಜಿಕಲ್ಲ ಪೋಲ್ದಾತುವನೋಲ್ ॥

(ಲವನು ಪ್ರವೇಶಿಸುವನು)

ಲವ—ಪೂಜ್ಯರಾದಾಗ್ಯೂ ಇವರ ಕುಲನಾಮಕ್ರಮಗಳನ್ನು ತಿಳಿಯದೆ ಇವ
ರನ್ನು ಸ್ವತಂತ್ರಿಸಿ ಹ್ಯಾಗೆ ನಮಸ್ಕರಿಸತಕ್ಕದ್ದು. (ಚಿಂತಿಸಿ) ಯಾದಾ
ದರೇನು ಹಿರಿಯರಾದವರಿಗೆ ನಮಸ್ಕರಿಸಬೇಕೆಂದು ಗುರುಜನಗಳಿಂದ
ಕೇಳಬಲ್ಲೆನು. ( ವಿನಯಪೂರ್ವಕವಾಗಿ ಸಮೀಪಕ್ಕೆ ಬಂದು )
ಇದೋ ಲವನು ನಮಸ್ಕರಿಸುವನು.

ಅರುಂಧತಿ, ಜನಕ. — ಎಲೈ ಮಂಗಳಾಂಗನೆ ಆಯುಷ್ಮಂತನಾಗು.

ಅರುಂಧತಿ—ಬಾ ವತ್ಸ ಬಾ. (ಎಂದು [illegible]

ಕೊಂಡು ಮರೆಯಲ್ಲಿ) ದೈವಯೋಗದಿಂದ ನನ್ನ ಅಂಕವು ಪೂರ್ಣ ವಾದದ್ದಲ್ಲವೆ? ಮನೋರಥವು ಪೂರ್ಣವಾಯಿತು.

ಕೌಸಲ್ಯೆ—ಜಾತನೆ ಯಿತ್ತ ಸ್ವಲ್ಪ ಬಾ. (ಲವನನ್ನು ತಬ್ಬಿಕೊಂಡು) ವತ್ಸ ಎಲ್ಲಿ ನಿನ್ನ ಮುಖಚಂದ್ರನನ್ನು ಚೆನ್ನಾಗಿ ನೋಡುವೆನು. (ಎಂದು ಗಲ್ಲವನ್ನು ಹಿಡಿದೆತ್ತಿ ನೋಡಿ ಕಣ್ಣೀರಿಂದ ಕೂಡಿ) ಎಲೈ ರಾಜ ಋಷಿಯೆ ನೋಡಲಿಲ್ಲವೆ ಚೆನ್ನಾಗಿ ನೋಡಲು ಈ ಮಗುವಿನ ಮುಖವು ಆ ಜಾನಕಿಯ ನಗೆಮೊಗಕ್ಕೆ ಸಾಟಿಯಾಗಿದೆಯೋ ಇರುವುದು

ಜನಕ—ಎಲೌ ಪ್ರಿಯಸಖಿಯೆ ನೋಡುವೆನು. (ಎಂದು ನೋಡಿ)

ಕಂ|| ಅನುಯೋಗವಾಕ್ಯಗಳ್ಗೆ |
ಗಾವರಾತಾವಿನಯಮೆಲ್ಲ ವೀಕ್ಷಿಸೆಸೀತಾ ||
ರಾಮರಪೂರ್ಣಛಾಯೆಯೊ |
ಲೀ ಮಗುವೊಳುತೋರ್ಪುದೆಂತು ಸ್ಮರಿಸನಾನಾ ||

ಕೌಸಲ್ಯೆ—ವತ್ಸ ನಿನ್ನ ತಾಯಿ ಇರುವಳೆ, ನಿನ್ನ ತಂದೆಯನ್ನು ಸ್ಮರಿಸುವೆಯೊ?

ಲವ—ಇಲ್ಲ.

ಕೌಸಲ್ಯೆ—ಹಾಗಾದರೆ ನೀನು ಯಾರಮಗ?

ಲವ—ಪೂಜ್ಯರಾದ ವಾಲ್ಮೀಕಿಗಳ ಮಗನು.

ಕೌಸಲ್ಯೆ—ವತ್ಸನೆ ಹೇಳತಕ್ಕದ್ದನ್ನೆಲ್ಲಾ ಹೇಳು ಕೇಳುವೆನು.

---

* ರಾಗ || ಬೇಹಾಗ್ ||

ಅನುಕರಿಸುವನು | ಮತ್ತನೆಯನಾಕೃತಿಯನು ||ಪ|| ಕೋಮಲದೂರ್ವಾಶ್ಯಾಮಳನು | ಭರತನುರಾಮನೋಯುತದೆ | ರಾಮಭದ್ರನನು ||೧|| ನಳಿನಕೋಸರವನಸಿದರಸಂಚೆಯಕಲರವದಂತಿಹ | ಲಲಿತಸ್ವರದಿಂ ||೨|| ಅರ್ಧೈದೊಡೆಸುತ | ವಹರನವ್ಯದುಳಕರೀರಸ್ಪರ್ಶವ | ಈರೀತಿಯತಾನನುಕರಿಸುವನೆನ್ನ | ತನಯ

ಲವ—ಇಷ್ಟೇ ನನಗೆ ತಿಳಿಯತಕ್ಕದ್ದು.

ತೆರೆಯಲ್ಲಿ—ಎಲಾ ಎಲಾ ಸೈನಿಕರಿರಾ! ಆಶ್ರಮಸಮೀಪದ ಭೂಮಿಯನ್ನು ಯಾರೂ ಆಕ್ರಮಿಸಕೂಡದು. ಇದೋ ಕುಮಾರ ಚಂದ್ರಕೇತು ಆಜ್ಞಾಪಿಸುವನು.

ಅರುಂಧತಿ—ಓಹೋ! ಅಶ್ವಮೇಧ ಕುದುರೆಯ ರಕ್ಷಣನಿಮಿತ್ತ ವತ್ಸನಾದ ಚಂದ್ರಕೇತುವು ಬಂದನು. ಅವಶ್ಯವಾಗಿ ಅವನನ್ನು ಕಾಣಬೇಕು. ಹಾಹಾ ಸುದಿನವು.

ಕೌಸಲ್ಯೆ—ವತ್ಸನಾದ ಲಕ್ಷ್ಮಣಕುಮಾರನು ಆಜ್ಞಾಪಿಸುವನೆಂಬ ಅಕ್ಷರಗಳು ಕರ್ಣಾಮೃತಗಳಾಗಿರುವುವು.

ಲವ—(ಜನಕನನ್ನು ಕುರಿತು) ಆರ್ಯನೆ! ಚಂದ್ರಕೇತುಯಾರು.

ಜನಕ—ಎಲೆವತ್ಸನೆ ದಶರಥಪುತ್ರರಾದ ರಾಮಲಕ್ಷ್ಮಣರನ್ನು ಕೇಳಬಲ್ಲೆಯ?

ಲವ—ಬಲ್ಲೆ ಅವರುತಾನೆ ರಾಮಾಯಣಕಥಾನಾಯಕರು.

ಜನಕ—ಇಷ್ಟು ತಿಳಿದು ಈಚಂದ್ರಕೇತುವು ಲಕ್ಷ್ಮಣಪುತ್ರನೆಂದು ತಿಳಿಯದೆ ಹೋದೆಯಾ.

ಲವ—ಹಾಗೆ? ಬಲ್ಲೆಬಲ್ಲೆ. ಮಿಥಿಲಾಧಿಪತಿಯಾದ ಜನಕನದೌಹಿತ್ರ ಈತ ಊರ್ಮಿಳಾಪುತ್ರನು.

ಅರುಂಧತಿ-(ನಕ್ಕು) ಕಥಾಪಾಂಡಿತ್ಯವನ್ನು ಈತನು ಚೆನ್ನಾಗಿ ಪ್ರಕಟಿಸಿದನು.

ಜನಕ—ನೀನು ಇಷ್ಟು ಜಾಣನಾದರೆ ಕೇಳುವೆನು ಹೇಳು ದಶರಥನಪತ್ನಿಯರಲ್ಲಿ ಯಾರ್ಯಾರು ಉದಿಸಿದರು. ಅವರ ಹೆಸರೇನು ?

ಲವ—ಈ ಕಥಾವಿಭಾಗವು ನಮ್ಮಿಂದಲೂ ಮತ್ತೊಬ್ಬನಿಂದಲೂ ಕೇಳಿದ್ದಲ್ಲ.

ಜನಕ—ಕವಿಯಿಂದಲೂ ಹೇಳಲ್ಪಡಲಿಲ್ಲವೆ ?

ಲವ—ಹೇಳಲ್ಪಟ್ಟಿದೆ. ಪ್ರಕಾಶಪಡಿಸಲಿಲ್ಲ. ಅದರಲ್ಲಿ ಒಂದು ಭಾಗವನ್ನು ನಾಟಕರೂಪವಾಗಿಮಾಡಿ ಸ್ವಹಸ್ತದಿಂದಲೆ ಬರೆದು ಪ್ರಾಜ್ಞರಾದ

ಜನಕ—ಯಾತಕ್ಕಾಗಿ ?

ಲವ—ಆ ಭರತಮುನಿಗಳು ವಾಲ್ಮೀಕಿಗಳಿಗೆ ಅದರಲ್ಲಿ ಬಹಳ ವಿಶ್ವಾಸವುಂಟು. ಶಿಷ್ಯರ ಹಸ್ತದಿಂದ ಭರತಾಶ್ರಮಕ್ಕೆ ಕಳುಹಿಸಿದರು. ಅವರಸಂಗಡ ರಕ್ಷಣಾರ್ಥವಾಗಿ ಧನುರ್ಧಾರಿಯಾದ ನನ್ನ ಸಹೋದರನನ್ನು ಕಳುಹಿಸಿರುವರು.

ಜನಕ—ನಿನಗೆ ಸಹೋದರನು ಇರುವನೆ ?

ಲವ—ಇರುವನು.

ಕೌಸಲ್ಯೆ—ಆತನು ನಿನಗೆ ಅಣ್ಣನೊ ತಮ್ಮನೊ ?

ಲವ—ಉತ್ಪತ್ತಿಕ್ರಮದಲ್ಲಿ ಅವನೇ ಜ್ಯೇಷ್ಠನು.

ಕೌಸಲ್ಯೆ—ಹಾಗಾದರೆ ನೀವು ಅವಳೀ ಮಕ್ಕಳೊ ?

ಲವ—ಹೌದು.

ಜನಕ—ಪೂರ್ತಿಯಾಗಿ ಆ ಕಥೆಯನ್ನು ಹೇಳು.

ಲವ—ಪುರಜನರ ಮಿಥ್ಯಾಪವಾದವನ್ನು ಕೇಳಿ ಭೀತನಾದ ಮಹಾರಾಜನ ಅಜ್ಞಾನುಸಾರವಾಗಿ ಪೂರ್ಣಗರ್ಭಿಣಿಯಾದ ಜಾನಕಿಯನ್ನು ಅರಣ್ಯದಲ್ಲಿ ಬಿಟ್ಟು ಲಕ್ಷ್ಮಣನು ಹಿಂತಿರುಗಿದನು.

ಕೌಸಲ್ಯೆ—ಹಾ ವತ್ಸೆ ! ಕೋಮಲಾಂಗಿಯಾದ ನಿನ್ನೊಬ್ಬಳಿಗೆ ಹೀಗೆ ಪರಿಣಮಿಸಿತೆ ?

* ಜನಕ—

ಲವ—ಎಲೌ ಆರ್ಯೆ, ಇವರ್‍ಯಾರು ?

ಅರುಂಧತಿ—ಈಕೆ ಕೌಸಲ್ಯೆ, ಈತ ಜನಕ.

---

* ರಾಗ॥ ತಾಳ॥

ಸೀತೆ ಭೂಮಿಜಾತೆ ಅಹಾ । ಮಾತೆ ಅಹಾ ॥ಪ॥ ಈತೆರದಜನಾಪವಾದಕ್ಕೀಡಾದೆಯಾ । ಮಾತೆ ಅಹಾ ॥ ಅ ॥ ಬನದಿಘೋರಮೃಗಗಳು । ತಿನಲುಮೇಲೆ ಬೀಳಲು । ಜನಕ ಅಹಾ ಯೆನ್ನತೆಂಕು ವನದಿಗೋಳಿಟ್ಟೆಯೊ ಅಹಾ ॥೧॥ ಪ್ರಸವವೇದನೆಯಲಿ । ಸಣಿಯಾಗುತ್ತಲಿ । ಬಸವಳಿಯುತಾಲೆಂತದೆನ್ನ ।

(ಬಳಿಕ ಲವನು ಬಹುಮಾನವಾಗಿ ನೋಡುವನು)

ಜನಕ—(ಕೋಪದಿಂದ) ಅಹ ಪುರಜನರು ಮರ್ಯಾದೆಯನ್ನು ಮೀರಿ ನಡೆದದ್ದು ರಾಜನಾದ ರಾಮನು ವಿಚಾರಮಾಡದೆ ನುಡಿದದ್ದು ಇವೆರಡೂ ಅಶ್ಚರ್ಯ.

ಕಂ|| ಈಪರಿಗೈವರದರೊಳ್ ಮ |
ತ್ಕೋಪಾನಲನಿಂದು ಭುಗಿಲೆನುತ್ತುಜ್ವಲಿಕುಂ ||
ಚಾಪದೊಳಾದೊಡಮಥವಾ |
ಶಾಪದೊಳಾದೊಡಾಕ್ರಮಿಸುವೆಂ ||

ಕೌಸಲ್ಯೆ—ಎಲೌ ಪೂಜ್ಯಳೆ ಕಾಪಾಡು ಕಾಪಾಡು. ಕುಪಿತನಾದ ರಾಜರ್ಷಿಯನ್ನು ಪ್ರಸನ್ನನನ್ನಾಗಿ ಮಾಡು.

ಅರುಂಧತಿ—ಕಂ|| ಅವಮಾನದೆಮ್ಮಾನಿಗಳಾ |
ದವರ ಮನಂ ಕೆಟ್ಟುದಾದೊಡಮವನೀ ||
ಧವನೈರಿಸೈಯ್ಯ ರಾಮಂ |
ಕುವರಂ ಪುರಜನರು ದೀನರವರಂ ಸಲಹೈ ||

ಸಹಜ ಎಲೈ ರಾಜರ್ಷಿಯೇ ನೈರಿಸು ಸುಪುತ್ರನಾದ ರಾಮಭದ್ರನಲ್ಲಿಯೂ ದೀನರಾದ ಪುರಜನಗಳಲ್ಲಿಯೂ ಕೋಪಿಸಕೂಡದು.

ಜನಕ—ಕಂ || ನಂದಿತ್ತು ಕೋಪಶಿಖಿ ರಘು |
ನಂದನನೊಳು ಪೌರರೊಳು ಮಕಟಾ ರಾಮಂ ||
ಕಂದಂ ಪರಿಕಿಸೆ ಪುರಜನ |
ವೃಂದಂ ತಾನಹುದು ಬಾಲವೃದ್ಧಸ್ತ್ರೀಯರ್ ||

ವಟುಗಳು—(ಸಂಭ್ರಾಂತರಾಗಿ) ಎಲೈ ಕುಮಾರನೆ ಅಶ್ವ ಅಶ್ವವೆಂದು ಯಾವುದೋ ಬಂದು ಪ್ರಾಣಿ ಅನ್ಯದೇಶದಲ್ಲಿ ಕೇಳಬಲ್ಲೆವಷ್ಟೆ. ಅದನ್ನು ಈಗ ಪ್ರತ್ಯಕ್ಷವಾಗಿ ಕಂಡೆವು.

ಲವ—ಅಶ್ವವೆಂದು ಪಶುಶಾಸ್ತ್ರದಲ್ಲಿಯೂ ಯುದ್ಧದಲ್ಲಿಯೂ ಕರೆಯಲ್ಪಟ್ಟಿದೆ. ಅದ್ದರಿಂದ ಅದು ಹ್ಯಾಗಿದೆ ಹೇಳಿ.

* ವಟುಗಳು—

---

* ರಾಗ|| ತಾಳ||

ಕೇಳುಕೇಳುಪೇಳುವವನಾತ । ಬಾಲವ[illegible]ದ್ರಾಗದೊಳುಮಿಗೆ। ತಾಳಿದಕೊಂ

ಲವ—(ವಿನಯದಿಂದ) ಎಲೈ ಆರ್ಯರುಗಳಿರ ! ನೋಡಿನೋಡಿ ಇವರು ನನ್ನ
ನ್ನು ಸೆಳೆದುಕೊಂಡು ಹೋಗುತ್ತಾರೆ. (ತ್ವರೆಯಿಂದ ಹೋಗುವನು)

ಕೌಸಲ್ಯೆ—ಎಲೌ ಪೂಜ್ಯಳೆ ಈತನನ್ನು ಕಾಣದಿದ್ದರೆ ಸೈರಿಸಲಾರೆನು. ಆದ್ದ
ರಿಂದ ಇನ್ನೊಂದುಕಡೆಗೆ ಹೋಗಿ ವಟುಗಳೊಡನೆ ಹೋದ ಕುಮಾ
ರನನ್ನು ಪುನಃ ನೋಡೋಣ.

ಅರುಂಧತಿ—ಎಲೈ ದೇವಿಯೆ ಆ ಚಪಲನು ಬಹು ದೂರಕ್ಕೆಹೋದನು.
ಕಾಣಿಸುವುದು ಹ್ಯಾಗೆ ?

(ಅನಂತರ ಕಂಚುಕಿ ಬರುವನು)

ಕಂಚುಕಿ—ಸಮಯದಲ್ಲಿ ನಿನಗೆ ತಿಳಿಯುವುದೆಂದು ಪೂಜ್ಯರಾದ ವಾಲ್ಮೀಕಿ
ಗಳು ಆಜ್ಞಾಪಿಸಿದರು.

ಜನಕ—ಇದು ಬಹು ಗಂಭೀರವಾಗಿದೆ. ಏನೋ ಒಂದು ಆಶ್ಚರ್ಯವು ನಡೆ
ಯುವುದು. ಆದುದರಿಂದ ಎಲೌ ಅರುಂಧತಿಯೆ ಎಲೌ ಕೌಸಲ್ಯೆಯೆ
ಬನ್ನಿ ಹೋಗೋಣ. (ಎಂದೆಲ್ಲರೂ ಹೋಗುವರು)

(ಅನಂತರ ಲವನೊಡನೆ ವಟುಗಳು ಪ್ರವೇಶಿಸುವರು)

ವಟುಗಳು—ಎಲೈ ಕುಮಾರನೆ ಆಶ್ಚರ್ಯವನ್ನು ನೋಡು.

ಲವ—ನೋಡಿದೆ ತಿಳಿತು ಇದೇ ಅಶ್ವಮೇಧದ ಕುದುರೆ.

ತೆರೆಯಲ್ಲಿ—ಕಂ॥ ಈರೇಳ್ ಲೋಕಕ್ಕೊರ್ವನೆ ।
ವೀರಾಗ್ರಣಿಯೆನಿಪ ರಾಮಗಾರಾತಿಯದೀ ॥
ಭಾರುತರಾಶ್ವಂ ಮೇಣು ।
ದ್ವೀರತೆಯಂ ಸಾರುತಿರ್ಪ ವಿಜಯಪತಾಕಂ ॥

ಲವ—(ಕೋಪದಿಂದ) ಅಹ ಈ ಮಾತುಗಳು ನನಗೆ ಕೋಪವನ್ನು ಹೆಚ್ಚಿ
ಸುವುವು. (ತೆರೆಯಕಡೆ ನೋಡಿ) ಎಲಾ ಏನು ಹೀಗೆಹೇಳುತ್ತೀರಿ !
ಈ ಭೂಮಿಯಲ್ಲಿ ಕ್ಷತ್ರಿಯರು ಯಾರೂ ಇಲ್ಲವೋ ?

ತೆರೆಯಲ್ಲಿ—ನಮ್ಮ ಮಹಾರಾಜನನ್ನು ಬಿಟ್ಟರೆ ಇನ್ಯಾರೂ ಕ್ಷತ್ರಿಯರೇ ಇಲ್ಲ.

---

ನಾಲ್ಕುವಳೆ ॥೩॥ ಎಳೆಹುಲ್ಲತಿಂದು । ಪುರೀಷವನುಬೆಳಗಾಯಿತು । ಯುಂತಿದು
ಪರಿದು ॥೩॥ ಆಡುವದೇನಾದುವದು । ಮುಂದೆಪೋಪುದಾವೆವಾಂ । ಬಾಬಾ

* ಲವ—ಎಲೈ ವಟುಗಳಿರಾ ಈ ಕುದುರೆಯನ್ನು ಕಲ್ಲುಗಳಿಂದ ಹೊಡೆದು ಅರಣ್ಯಕ್ಕೆ ಓಡಿಸಿ.

(ಅನಂತರ ಕ್ರೋಧಗರ್ವಗಳಿಂದ ಕೂಡಿದ ಪುರುಷನು ಪ್ರವೇಶಿಸುವನು)

ಪುರುಷ—ಎಲೈ ನಿನ್ನ ಚಪಲತೆಯನ್ನು ತೆಗೆತೆಗೆ. ಯಾರಮೊಂದೆ ತೋರಿಸುವೆ ತೀಕ್ಷ್ಣಗಳಾದ ಶರಗಳು ಶಿಶುಗಳಾದಾಗ್ಯೂ ಗರ್ವದಮಾತುಗಳನ್ನು ಸಹಿಸುವವಲ್ಲ. ಅರಿಮರ್ದನನಾದ ಲಕ್ಷ್ಮಣಪುತ್ರನಾದ ಚಂದ್ರಕೇತುವು ಇದೋ ಬರುವನು. ಆತನುಬರುವುದರೊಳಗಾಗಿ ಓಡಿಹೋಗಿ.

ವಟುಗಳು—ಎಲೈ ಕುಮಾರನೆ ಕುದುರೆಯಿಂದ ನಮಗಾಗತಕ್ಕದ್ದೇನು? ಬಿಡುಬಿಡು, ಜ್ವಲಿಸುವ ಆಯುಧಶ್ರೇಣಿಗಳು ನಮ್ಮನ್ನು ಭಯಪಡಿಸುವುವು. ಆಶ್ರಮವು ದೂರವಾಗಿದೆ ಆದ್ದರಿಂದ ಬಾ ಹುಲ್ಲೆಯ ಹಾರಿಕೆಯಂತೆ ಓಡಿಹೋಗೋಣ.

ಲವ—ಏನುಏನು? ಶಸ್ತ್ರಗಳು ಜ್ವಲಿಸುತ್ತಿರುವುವೋ ಹಾಗಾದರೆ ನೋಡಿ. (ಎಂದು ಧನುಸ್ಸನ್ನು ತೋರಿಸಿ)

ಕಂ|| ಹೂಂಕಾರದೊಳಿಹ ಮೌರ್ವೀ |
ಟಂಕಾರದೆ ಮೇಘರವವ ಮಾಳ್ಪೀಚಾಪಂ ||
ಶಂಕಿಸದೆಕವಿದವೀರರ |
ಹುಂಕಾರವನೀಗಳರದೆ ನಿಲ್ಲಿ ಪೆರಣದೊಳ್ ||

(ಎಂದೆಲ್ಲರೂ ಹೋಗುವರು)

ನಾಲ್ಕನೆಯ ಅಂಕ ಮುಗಿದುದು

❋❋❋

---

* ರಾಗ|| ಬೇಹಾಗ್|| ತಾಳ||

ಹೊಡೆಹೊಡೆನೀಚರ । ಕಡುಗಿದಬಾಯನು । ಥಡಥಡ । ದಾರೊಳು । ನುಡಿ ನಿರಿಪಂಥವ ||೧|| ಛಲನಿಮ್ಮರಸನು । ಕಲಿಯಾದವರೆ । ನಳ[illegible]ರಿಂದ । ಕೆಲಸ್ಸನಿಕರಿರ ||೨|| ಸಾಕಾಡುವದಿ । ನ್ನೇಕಕೆಕ್ಷಣದೊಳು । ತಾಳುತವಿಟಿಯ

# ಐದನೆಯ ಅಂಕ.

* (ತೆರೆಯಲ್ಲಿ ಗಾನಮಾಡುವರು)

(ಅನಂತರ ಸುಮಂತ್ರ ಸಾರಥಿ ಸಮೇತನಾಗಿ ಚಂದ್ರಕೇತು
ರಥಾರೂಢನಾಗಿ ಪ್ರವೇಶಿಸುವನು)

† ಚಂದ್ರಕೇತು—ಎಲೈ ಆರ್ಯ ಸುಮಂತ್ರನೆ! ನೋಡುನೋಡು.

ಸುಮಂತ್ರ—ಎಲೈ ವತ್ಸನೆ! ನಿಜ.

ಕಂ|| ಚೆಲ್ವಿಂದೆ ನಿನ್ನ ರೂಪನೆ |
ಪೋಲ್ವೀ ಶಿಶುವಿವನ ನೋಡೆ ಕೌಶಿಕಮುಖದೊಳ್ ||
ಗೆಲ್ವಿದೆ ಸುಬಾಹುಮುಖರಂ |
ಬಿಲ್ವಿಡಿದಾ ರಾಮಭದ್ರನಂ ನೆನೆಯಿಸುವಂ ||

ಚಂದ್ರಕೇತು—ಇವನೊಬ್ಬನಲ್ಲಿ ಬಹುಮಂದಿಗಳು ಯುದ್ಧವನ್ನುಪಕ್ರಮಿಸಿದ್ದು ನೋಡಿ ನನ್ನ ಮನಸ್ಸು ಲಜ್ಜೆಪಡುವುದು.

---

* ರಾಗ || ಸೋಟು || ತಾಳ ||

ಎಲೆಲೆಸೈನಿಕರೆ ನಿಮಗೆ ಬೆಂಬಲವಾಯ್ತು | ಅಳುಕಲೇಕೆ ಬಾಲಕನೊಳು ಬಲುಜನ್ನಾಯ್ತು || ೧ || ಖ್ಯಾತನೆನಿಸುವಾಸುಮಂತ್ರ | ಸೂತನಕೂಡಿ ಐತರುವನು ಚಂದ್ರಕೇತುವುನೋಡಿ || ೨ || ತೋರುವುದಿದೋನೋಡಿ | ಕೋವಿದಾರಪತಾಕೆ | ಕೇರಿನಲ್ಲಿ ಚಲಿಸಪಟವು | ಗಗನತಾಕೆ ||

† ರಾಗ || ಸೋಟು || ತಾಳ ||

ಆರೋ ಕಾಣೆನು | ಕುಮಾರ ವೀರನು | ವೀರನಾಗಿ ಸುರಿವನು | ಶರಧಾರೆಯನ್ನು ತಾ ||೧|| ಇನಿತು ಶೌರ್ಯವೀ | ತನೊಳಗಿಹುದಕೆ | ಮನವಿದಾಶ್ಚರ್ಯ ಪಡೆವು | ದೆನುತುಮುಸುರ್ವೆನು || ೨ || ಬಲಿಯಾದಿಹ ರಘು ಕುಲದ ಮೊಳಕೆ ನೋಡಿ | ಹೊಳೆವನಿವನ ಕಲಿತನವೇಂ | ಹೊಗಳೆ ನಹದಹದಾಂ || ೩ ||

ಕಂ|| ಒಂದುಕಡೆ ಶಸ್ತ್ರಧರಭಟ |
ವೃಂದಂ ಮತ್ತೊಂದುಕಡೆ ರಥಾರೋಹಕರುಂ ||
ಇನ್ನೊಂದುಕಡೆ ಮದಗಜಂಗಳ್ |
ಸಂದೋಹಂ ಮುತ್ತಿತಹಹ ಶಿಶುವಿವನೊರ್ವಂ ||

ಸುಮಂತ್ರ—ಎಲೈ ವತ್ಸನೆ! ಎಲ್ಲಾ ಕಡೆಯಲ್ಲೂ ಮುತ್ತಿದರೂ ಈ ಬಾಲಕನು ನಮ್ಮ ಬಲವನ್ನು ಗಣಿಸದಿರುವನು. ಇನ್ನು ಮುತ್ತಿದ್ದರೆ ಹೇಳತಕ್ಕದ್ದೇನು ?

ಚಂದ್ರಕೇತು—ನಿಜ. ಆರ್ಯನೆ! ಬೇಗ ರಥವನ್ನು ಹಾರಿಸು ನಮ್ಮ ಸೈನಿಕರ ಕೊಲೆಗೆ ಇವನು ಉಪಕ್ರಮಿಸಿದನು. ನೋಡು ?

ಕಂ|| ಅತಿಬಲನೀ ಶಿಶು ಮುತ್ತಿದ |
ಚತುರಂಗಬಲಂಗಳಂ ಕ್ಷಣಾರ್ಧದೊಳಹಹಾ ||
ಕ್ಷಿತಿಯೊಳ್ ಕೆಡಪಿದನಿವನ |
ಪ್ರತಿಭಟನೀತನ ಪರಾಕ್ರಮಕ್ಕೆಣೆಯಿಲ್ಲಂ ||*

ಸುಮಂತ್ರ—ಇಂಥಾ ಪರಾಕ್ರಮಿಯಾದ ಇವನೊಡನೆ ವತ್ಸನಾದ ಚಂದ್ರಕೇತುವನ್ನು ದ್ವಂದ್ವಯುದ್ಧಕ್ಕೆ ಹ್ಯಾಗೆತಾನೆ ನೇಮಿಸಲಿ. ಅಥವಾ ಇಕ್ಷ್ವಾಕುಕುಲದ ವೀರವ್ರತವನ್ನು ನಾವು ಬಲ್ಲವರಷ್ಟೆ. ಅಂಥಾ ಸಮಯಪ್ರೊದಗಿದಾಗ ಮಾಡತಕ್ಕದ್ದೇನು ?

ಚಂದ್ರಕೇತು—(ಸವಿಸ್ಮಯ ಲಜ್ಜೆಗಳಿಂದ ಕೂಡಿ) ತೆಗೆ ತೆಗೆ. ನಮ್ಮ ಸೈನ್ಯವೆಲ್ಲಾ ಹಿಂತೆಗೆಯಿತಲ್ಲಾ. ಆರ್ಯನೆ! ರಥವನ್ನು ಬೇಗಬಿಡು.

---

* ರಾಗ || ಕಮಾಚ್ || ತಾಳ ||

ಅಮಮಾ ಕುಮಾರನು | ಸಮರೈಕ ಶೂರನು ||ಪ|| ತಿರುವಿನಬ್ಬರದಿ ದಿ | ಕ್ಕರಿಗಳಚಿವಿದಾಗಿಸುತ್ತ ಕರದಜಳಕವೆಂತೊ | ಸರಳ ಸರಿಯ ಸುರಿವನು || ೧ ||
ಗಂಡುಗಲಿಯು ಬಾಣದಿ | ಕಡಿಬಂಡವಾಡಬಲದ ಭೂ | ಮಂಡಲವಿದೊ

ಸುಮಂತ್ರ—(ರಥವೇಗವನ್ನಭಿನಯಿಸಿ) ಎಲೈ ವತ್ಸನೆ! [illegible]
ಮಾತನಾಡಿಕೊಳ್ಳುತ್ತಿದ್ದ ಆ ವೀರನು.

ಚಂದ್ರಕೇತು—(ವಿಸ್ಮೃತಿಯನ್ನಭಿನಯಿಸಿ) ಆರ್ಯನೆ! ಈತನ ಹೆಸರೇನು?

ಸುಮಂತ್ರ—ಈತನ ಹೆಸರು ಲವನೆಂದು ಸ್ತುತಿಪಾಠಕರಿಂದ ಕೇಳಿದೆನು.

ಚಂದ್ರಕೇತು—ಎಲೈ ವೀರನೆ! ನಿನಗೀ ಬಲದವರೊಡನೆ ಕಲಹವೇತಕ್ಕೆ
ಬಾ, ಬಾ. ಯುದ್ಧಭೂಮಿಯಲ್ಲಿ ರಣಕೌಶಲವಂ ತೋರುವೆನು.

ಸುಮಂತ್ರ—ಎಲೈ ವತ್ಸ! ಚಂದ್ರಕೇತುವೆ ನೋಡು ನೋಡು.

ಕಂ॥ ಕರೆಯಲ್ ನೀಂ ಕೂಡಲೆ ಹಿಂ।
ದಿರುಗಿದನಿದೊ ಬಾಲನೆಮ್ಮ ಸೈನಿಕರಂ ಸಂ॥
ಹರಿಪುದುಳಿದಪಪ ಗುರಿಗಿಗೆ।
ಕರಿಗಳಕೊಲೆಬಿಟ್ಟು ಬರ್ಪ ಸಿಂಹದಮರಿವೋಲ್॥

(ಅನಂತರ ತ್ವರಿತವಾಗಿ ಕೂಗುತ್ತಾ ಲವನು ಪ್ರವೇಶಿಸುವನು)

ಲವ—ಭಾಪ್ಪ, ರಾಜಪುತ್ರನೆ! ಭಾಪ್ಪ, ನೀನು ಇಕ್ಷ್ವಾಕುಕುಲಸಂಭೂತ
ನಲ್ಲವೆ! ಆದ್ದರಿಂದ ನಿನ್ನೊಡನೆ ಯುದ್ಧಮಾಡಬೇಕೆಂದು ತಿರುಗಿ
ಬಂದೆನು.

*ತೆರೆಯಲ್ಲಿ—

† (ತೆರೆಯಲ್ಲಿ ಕೋಲಾಹಲವಾಗುವುದು)

---

* ರಾಗ॥ ಸೋಟಿ॥ ತಾಳ॥

ಭಲಾರಾಜಪುತ್ರ। ಭಾನುಕುಲಭವನೆಲೆಯೆನುತ್ತ। ಯುದ್ಧವೆಸಗೆ ಬಂದನೀ
ಲವ ॥೧॥ ಸಮರಭಟನಕೂಡಿಮಾಳ್ಪ ಸಮರಫಲವು। ಕ್ರಮದೆನಿಲ್ಲು ಸೆಣಸೆ
ಕಲಿಪ್ಪುದಪುಮ ಬಾಹು ॥೨॥

† ರಾಗ॥ ಸೋಟಿ॥ ತಾಳ॥

ಬಾಪ್ಪೆ ಬಾಪ್ಪೆ ಬಾಲನೆಂದು। ಸ್ಮರಿಸಿದೊಡೆ ಕೊಬ್ಬಿನೀನು। ವಿಶಾರಿನಮ್ಮ ಜೈಸು
[illegible]

ಲವ—(ಕೋಪದಿಂದ ಹಿಂತಿರುಗಿ) ಅಹ! ಈಗತಾನೆ ಪರಾಜಯವನ್ನು
ಹೊಂದಿ ಪಲಾಯನ ಮಾಡಿದ ಸೇನಾ ಜನಗಳು ಪುನಶ್ಚ ಮೇಲೆಬಿದ್ದು
ಪ್ರಹರಿಸುವರು. ಹೊಡೆ ನೀಚರಬಾಯನ್ನು.

ಕಂ|| ಎಲೆ ಸೇನಾಪತಿಗಳಿರಾ |
ಜಲನಿಧಿಯ ತರಂಗತತಿಯ ಕುಡಿಯುವ ಬಡಬಾ ||
ನಲನಂತೆ ನನ್ನ ಕೋಪಾ |
ಜ್ವಲನಂ ದಹಿಸುವದು ನಿಲ್ಲಿ ನಿಮ್ಮಯ ಬಲಮಂ ||

(ಎಂದು ಹೋಗುವನು)

ಚಂದ್ರಕೇತು—ಎಲೈ ಕುಮಾರನೆ ಬಾ, ಬಾ.

ಕಂ|| ಘನಗುಣದಿಂ ಮಿತ್ರಂ ನೀ |
ನೆನಗಾಂ ಸಖನಯ್ಯ ನಿನಗೆ ಕೊಲುವರೆ ನಿನ್ನೀ ||
ಜನಮಂ ನಿನ್ನಯ ವಿಕ್ರಮ |
ಕನಕಕ್ಕಿದೊ ಚಂದ್ರಕೇತುವೊರೆಗಲ್ಲಲ್ತೇ ||

ಲವ—(ಹರ್ಷಸಂಭ್ರಮದಿಂದ ಕೂಡಿ) ಅಹ ಮಹಾನುಭಾವನಾದ ರವಿಕುಲ
ಕುಮಾರನ ಮಾತುಗಳು ಪ್ರಸನ್ನಗಳಾಗಿಯೂ ಕರ್ಕಶಗಳಾಗಿಯೂ
ಇರುವುವು. ಈ ಸೈನಿಕರಿಂದ ನನಗೇನು. ಈತನನ್ನೇ ಸಂಭಾ
ವಿಸುವೆನು.

(ಅನಂತರ ತೆರೆಯಲ್ಲಿ ಪುನಶ್ಚ ಕೋಲಾಹಲ ವಾಗುವುದು
ಹಿಂದಿನಮಟ್ಟು, ಬಾರೈ ಬಾರೈ ಎಂದು ಹೇಳುವರು.)

ಲವ—(ಕೋಪದಿಂದ) ಅಹ ತೆಗೆತೆಗೆ ಈ ವೀರನೊಡನೆ ಸಲ್ಲಾಪಮಾಡುವೆ
ನೆಂದರೆ ಪಾಪಿಗಳಾದ ಸೈನಿಕರು ಅವಕಾಶಕೊಡರಲ್ಲ. (ಎಂದು
ಅವರ ಅಭಿಮುಖನಾಗಿ ಹೋಗುವನು)

ಕಂ|| ಇರಿಸುತ್ತೆನ್ನೊಳಲಕ್ಷ್ಯವ |
ನಿರದನುಸರಿಸುತ್ತೆ ಹಿಂದೆಬಹಸೈನಿಕರಿಂ ||
ಮೆರೆವಂಧೃತಚಾಪನಿವಂ |
ಮರುತನಿನಲೆವಿಂದ್ರಚಾಪಯುತಜಲಧರದೋಲ್ ||

ಸುಮಂ—ಎಲೈ ವತ್ಸನೆ ಈತನನ್ನು ನೀನೇ ನೋಡು. ನಾನಂತು ಆಶ್ಚರ್ಯದಿಂದ ಪರವಶನಾಗಿರುವೆನು.

*ಚಂದ್ರ—ಎಲೈ ಸೇನಾನಾಯಕರಿರ!

ಲವ—ಆಹಾ ಇವಕೇನವಮಾನಲಿ, ಒಳ್ಳೇದು ಈಗ ಈ ಸೈನ್ಯವನ್ನೆಲ್ಲಾ ಜೃಂಭಕಾಸ್ತ್ರದಿಂದ ಸ್ತಂಭಿಸಿಬಿಡುವೆನು. (ಎಂದು ಧ್ಯಾನವನ್ನು ಅಭಿನಯಿಸುವನು)

ಸುಮಂ—ಇದೇನು ಅಕಸ್ಮಾತ್ತಾಗಿ ನಮ್ಮ ಸೇನಾಕೋಲಾಹಲವು ಶಾಂತವಾಯಿತು.

ಲವ—ಇನ್ನು ಈತನನ್ನು ಚನ್ನಾಗಿ ನೋಡುವೆನು.

ಸುಮಂ—ವತ್ಸನೆ ಕುಮಾರನು ಜೃಂಭಕಾಸ್ತ್ರವನ್ನು ಪ್ರಯೋಗಿಸಿದನು,

ಚಂದ್ರ—ಆರ್ಯನೆ ಅದಕ್ಕೆ ಸಂದೇಹವೇನು.

ಕಂ|| ನಿಶ್ಚಯಮಿದೆಮ್ಮ ಸೈನ್ಯಂ |
ನಿಶ್ಚಲವಾಗಿಹುದು ಬರೆದ ಚಿತ್ರದತೆರದಿಂ ||
ಆಶ್ಚರ್ಯಮೆಂಬರಂತೇ |
ಚಿಶ್ಚಿತ್ರಿತವಾಯ್ತು ಜೃಂಭಕಾಸ್ತ್ರಗಳಿಂದಂ ||

---

* ರಾಗ || ಬೇಹಾಗ್ ||

ಏನಿದೇನುಮಾನವೇಂದ್ರರೆ । ಸೂನುವಿನೊಳುರಣವಮಾಡೆ । ಮಾನವಿಲ್ಲವೇನಿಸೈಯ್ಯಾ ||೧|| ಕಿರಿಯನಿವನುವಯಸಿನಲಿ | ಹಿರಿಯರುನೀವೀಶನೊಬ್ಬ। ನರಕೆನೀವನೇಕರಿಂತು । ಧುರವನೆಸಗೆಮನವಮಾಳ್ಪರೇನಿದೇನಿದು ||೨|| ತೆಗೆತೆಗೆನಿಮ್ಮನುನಾವ್ವಮಿಗೆಅರಿಯುವದೇಕಕೇ । ಮಗುವಿನಲ್ಲಿಕದನವೆಮಗೆ |

ಸುಮಂ—ಈತನಿಗೆ ಜೃಂಭಕಾಸ್ತ್ರಗಳು ಯಾರಿಂದ ಲಭಿಸಿದವೋ ಕಾಣೆ.

ಚಂದ್ರ—ಇನ್ನಾರಿಂದ, ವಾಲ್ಮೀಕಿಮುನಿಗಳಿಂದ ಲಭಿಸಿರುವುವೆಂದು ಊಹಿಸುವೆನು.

ಸುಮಂ—ಎಲೈ ಕುಮಾರನೆ ಹಾಗಲ್ಲ ಕೇಳು. ಈ ಅಸ್ತ್ರಗಳು ಕೃಶಾಶ್ವನಿಂದ ವಿಶ್ವಾಮಿತ್ರರಿಗೆ ಬಂದವು. ಅನಂತರ ತಾಟಕಾವಧೆಯಲ್ಲಿ ವಿಶ್ವಾಮಿತ್ರರಿಂದ ರಾಮಭದ್ರನಿಗೆ ಕೊಡಲ್ಪಟ್ಟವು.

ಚಂದ್ರ—ಮಂತ್ರದೃಷ್ಟಿಯುಳ್ಳವರು ತಾವೇ ಬಲ್ಲಿರಿ.

ಸುಮಂ—ಎಲೈ ಕುಮಾರನೆ ಸಾವಧಾನನಾಗು ವೀರನಾದ ಲವನು ಬಂದನು.

ಕುಮಾರರು—(ಕುಮಾರರು ಪರಸ್ಪರವಾಗಿ)

ಆಹಾ ಕುಮಾರನ ದರ್ಶನವು ಬಹು ಪ್ರಿಯಕರವಾದದ್ದು.

(ಸ್ನೇಹದಿಂದ ಚನ್ನಾಗಿ ನೋಡಿ)

ಕುಮಾರರಿಬ್ಬರು—ಕಂ॥ ಪರಿಕಿಸಲೇನಿದು ಜನ್ಮಾಂ।
ತರಮೈತ್ರಿಯೊ ಮೇಣ್ ಸ್ವಕೀಯಸಂಬಂಧವೊ ನಾ ॥
ನರಿಯೆನಿವನಂ ವಿಲೋಕಿಸೆ ।
ಕರಗುವುದೀ ಚಿತ್ತಮಿವನ ಗುಣಮೆಂತುಮೆಯೊ ತಾಂ ॥

ಸುಮಂ—ಕಂ॥ ಅನಿಮಿತ್ತವಾದಮೈತ್ರಿಗೆ ।
ಜನಿಸದು ಜಗದೊಳ್ ಪ್ರತಿಕ್ರಿಯಂ ತಾನದರಿಂ ॥
ಮನವನಿರದೊಂದುಗೂಡಿಸಿ ।
ನನೆಕೊನೆಯಂ ಮಾಳ್ಪುದದು ಪರಸ್ಪರಮರಿಯೈ ॥

*ಚಂದ್ರ—

†ಲವ—

---

* ರಾಗ॥ ತಾಳ॥

ಆಹಾ ಈತನನೋಡಲಹ | ಈತನ ॥ಪ॥ ಆಹಾ ಈತನನ್ನು ನೋಡೆ ಸ್ನೇಹಮನ ದೊಳುಕ್ಕುತಿಹುದು। ಈಹದನೇಂ ಕಾಣೆ। ನೆಂಟುಪೂರ್ವಹೆಗ್ಗಿದರು ॥೧॥

‡ಚಂದ್ರ—

ಇಬ್ಬರೂ. ಕ್ಷತ್ರಿಯಪದ್ಧತಿಯೆ ಕ್ರೂರವಾದದ್ದು. ಮಾಡತಕ್ಕದ್ದೇನು.

ಸುಮಂ—ಲವನನ್ನು ನೋಡಿ (ಆತ್ಮಗತಂ) ಎಲೆ ಮನಸ್ಸೆ ಏತಕ್ಕೆ ಈತನನ್ನು ಸೀತಾಪುತ್ರನೆಂದು ಭ್ರಮೆಪಡುವೆ.

ಕಂ॥ ಮನುಕುಲಕೆಬೀಜವಾದಾ ।
ಜನಕಜೆಯುಂ ಮೊದಲೆ ದೈವವಳಸಿತ್ತಿನ್ನೇಂ ॥
ವನಲತೆ ಮುರಿದಬಳಿಕ್ಕಂ ।
ಜನಿಸುವ್ವದಿನ್ನೆತ್ತಣಿಂದ ಕುಸುಮಂ ಜಗದೊಳ್ ॥

ಚಂದ್ರ—ಆರ್ಯನೆ ರಥದಿಂದ ಇಳಿಯುವೆನು.

ಸುಮಂತ್ರ—ಅದೇತಕ್ಕೆ ಇಳಿಯುವೆ.

ಚಂದ್ರ—ಏತಕ್ಕೆಂದರೆ ನಾನು ಇಳಿದರೆ ಈ ವೀರಪುರುಷನನ್ನು ಪೂಜಿಸಿದ ಹಾಗೂ, ಕ್ಷತ್ರಧರ್ಮವನ್ನು ಹಿಡಿದಹಾಗೂ ಆಗುವುದು. ಅದು ಹೇಗೆಂದರೆ ಪ್ರತಿಭಟನು ಪಾದಚಾರಿಯಾಗಿರುವಾಗ ಸುಭಟನು ರಥಾರೂಢನಾಗಿ ಯುದ್ಧಮಾಡಕೂಡದೆಂದು ಶಾಸ್ತ್ರಜ್ಞರು ಹೇಳುವರು.

ಸುಮಂ-ಏನುಮಾಡಲಿ ನ್ಯಾಯವಾದದ್ದನ್ನು ನನ್ನಂಥಾವನು ಬೇಡವೆನ್ನುವದು ಹ್ಯಾಗೆ ಸಾಹಸೈಕಹೇತುವಾದ ಈ ಕಾರ್ಯವನ್ನು ಹ್ಯಾಗೆತಾನೇ ಆಜ್ಞಾಪಿಸಲಿ.

ಚಂದ್ರ—ಪೂಜ್ಯರಾದ ತಂದೆಗಳೂ ಕೂಡ ಧರ್ಮವಿಷಯದಲ್ಲಿ ಸಂಶಯಬಂದದ್ದೇ ಆದರೆ ತಮ್ಮನ್ನೇ ಕೇಳುತ್ತಿದ್ದರು. ಈಗ ಏತಕ್ಕೆ ಯೋಚಿಸುವಿರಿ.

ಸುಮಂ—ಎಲೆ ಆಯುಷ್ಮಂತನೆ ಕೇಳು.

---

‡ ಈತನೈದಲಪ್ಪಲುಮನ ।ವಾಚುರಿಸುತಲಿಹುದು ॥ಆಹ॥ ನಿಶಾತಶರವಬಿಡುವೆ।

ಕಂ॥ ನೀನೆಂದುದೆ ಧರ್ಮಂ ವೀ ।

ರಾನುಮತಂ ರಣದನೀತಿಯಿದು ಸತ್ಯಂಕೇಳ್ ॥

ಈನೆಲದೊಳ್ ರಘುಸಿಹ್ಮರ ।

ಭೂಸುತವಹವೀರಚರಿತಪದ್ಧತಿಯಿದೆತಾಂ ॥

ಚಂದ್ರ—ಆರ್ಯನೆ ಸಕಲಶಾಸ್ತ್ರಗಳನ್ನೂ ಮತ್ತು ರಘುಕುಲದವರ ಪದ್ಧತಿ ಯನ್ನೂ ತಾವೇಬಲ್ಲಿರಿ.

ಸುಮಂ—( ಸ್ನೇಹ ಬಾಷ್ಪದಿಂದಕೂಡಿ ) ಎಲೈ ವತ್ಸನೆ ನೀನು ಹೇಳಿದ್ದು ಯುಕ್ತ.

ಕಂ॥ ಅಣುಗನಿಜಜನಕನಹ ಲ ।

ಕ್ಷ್ಮಣನಿನ್ನುಂ ಬಾಲನವನಮಗನಹನೀನುಂ ॥

ರಣನೀತಿಯರಿತೆ ದೈವಕ ।

ರುಣದಿಂ ದಶರಥಕುಲಂಪ್ರತಿಷ್ಠಿತವಾಯ್ತೈ ॥

ಚಂದ್ರ—( ದುಃಖದಿಂದ )

ಕಂ॥ ಕುಲದೊಳ್ಪರಿಯಾತಂ ಮ ।

ಕ್ಕಳ ಪಡೆಯುದವೇಲೆ ನಮ್ಮ ಕುಲಕುನ್ನತಿಯೇ ॥

ನಿಳೆಯೊಳೆನುತಕಟ ದುಃಖಿಪ ।

ರುಳಿದೆಮ್ಮಯ ಮೂರುಮಂದಿ ತಂದೆಗಳೆಂದುಂ ॥

ಸುಮಂ—ಆಹ ಚಂದ್ರಕೇತುವಿನ ಮಾತುಗಳು ಬಹಳವಾಗಿ ಮನಸ್ಸನ್ನು ಮರುಗಿಸುವುವು.

ಲವ—ಇದೇನಾಶ್ಚರ್ಯವಾಗಿದೆ.

ಕಂ॥ ಉದಿಸಿದಶಶಿಯೊಳ್ ಕುಮುದಿನಿ ।

ಮುದಪಡೆವಂತೆನ್ನ ದೃಷ್ಟಿಸುಖಿಸುವದಿವನೊಳ್ ॥

ಕದನಕ್ಕೆಳಸುತಿ ಹುದೇ ।

ಚಂದ್ರ—(ರಥದಿಂದ ಇಳಿದು) ಆರ್ಯನೆ ಇದೋ ಸೂರ್ಯವಂಶಜನಾದ ಚಂದ್ರ

ಕೇತುವು ನಮಸ್ಕರಿಸುವನು.

ಸುಮಂ—ಎಲೈ ವತ್ಸನೆ

ಕಂ॥ ಕುವರಕುಲಕಾದ್ಯನಾದಾ ।
ರವಿಯುಂ ಗುರುವಹವಸಿಷ್ಠನುಂ ರಕ್ಷಿಕೆ ರಾ ॥
ಘುವರಾಮಲಕ್ಷ್ಮಣಜ್ಯಾ ।
ರವಮಂತ್ರಮುಮಿಾಗೆ ನಿನಗೆ ರಣದೊಳ್ ಜಯಮಂ ॥

ಲವ—ಎಲೈ ಕುಮಾರನೆ ನೀನು ರಥದಮೇಲೆ ಇರುವದೇ ನನಗೆ ಪ್ರಿಯವಾದದ್ದು. ಏತಕ್ಕೆ ಇಷ್ಟು ವಿನಯ.

ಚಂದ್ರ—ಎಲೈ ಭಾಗ್ಯಶಾಲಿಯೆ ನೀನು ರಥದಲ್ಲಿ ಕುಳಿತುಕೊಳ್ಳಬೇಕು. ಆರ್ಯನೆ ರಾಜಪುತ್ರನನ್ನು ರಥವನ್ನೇರಿಸು.

ಸುಮಂ—ನೀನು ಚಂದ್ರಕೇತುವಿನ ವಚನವನ್ನು ಸಲಿಸುವನಾಗು.

ಲವ—ನಮ್ಮ ಪದಾರ್ಥದಲ್ಲಿ ನಾವು ಕೂತುಕೊಳ್ಳುವದಕ್ಕೆ ವಿಚಾರವೇತಕ್ಕೆ ಆದರೆ ನಾವು ಅರಣ್ಯವಾಸಿಗಳು ರಥವನ್ನು ಹತ್ತುವ ಅಭ್ಯಾಸ ನಮಗಿಲ್ಲ.

ಸುಮಂ—ಎಲೈ ವತ್ಸನೆ! ಪರಾಕ್ರಮಕ್ಕೂ ಸುಜನತೆಗೂ ತಕ್ಕಹಾಗೆ ನಡೆಯಬಲ್ಲವನು ನೀನು. ಇಂಥಾ ಪರಾಕ್ರಮಿಯಾದ ನಿನ್ನನ್ನು ಮಹಾರಾಜನಾದ ರಾಮಭದ್ರನು ಕಂಡದ್ದೇ ಆದರೆ ಎಷ್ಟು ಸಂತೋಷಪಡುವನೋ ಕಾಣೆ.

ಲವ—ಎಲೈ ಆರ್ಯನೆ ಆ ರಾಜಋಷಿಯು ಸತ್ಪುರುಷನೆಂದು ಕೇಳಿರುವೆವು.

*ಕಂ॥ ನಾವೇಂ ಕ್ರತುಘಾತಿಗಳೇ ।
ಆವಂ ಧರ್ಮಾತ್ಮನೆನಿಸಿದಾ ರಾಜನ ಸಂ ॥

---

* ರಾಗ॥

ಕೇಳಿರೆನ್ನಯಮಾತನು। ಕೋಪದಾಳದೆನ್ನೊಳಗಾರ್ಯರೇನೀವು ॥ ಕೇಳಿ ॥
ಭೂತಲದೊಳು ಯಜ್ಞಘಾತಿಗಳಲ್ಲ। ನಾವೇತಕೀತೆರಗೈದೆವೆಂದೊಡೆನೀವು ॥

ಭಾವಿಸದಿರ್ಪಂ ಕುದುರೆಯ |

ಕಾವರ ಗರ್ವೋಕ್ತಿಯಿಂತು ಗೈದುದು ನಮ್ಮಂ ||

ಚಂದ್ರ—(ನಕ್ಕು) ಹಿರಿಯರ ಪರಾಕ್ರಮದಲ್ಲೂ ನಿನಗೆ ಸೈರಣೆ ಇಲ್ಲವೆ ?

ಲವ—ತಮಗೆ ಕೋಪವುಂಟಾಗದಿದ್ದರೆ ಕೇಳುವೆನು. ರಘುಕುಲದರಸು ನಿರಹಂಕಾರನೆಂದು ಕೇಳಿರುವೆನು. ಆ ಮಹಾರಾಜನು ತಾನು ಗರ್ವಪಡತಕ್ಕವನಲ್ಲ. ಆತನ ಪ್ರಜೆಗಳು ಗರ್ವಿಸುವವರಲ್ಲ. ಹೀಗಿರುವಾಗ ಆತನ ಮನುಷ್ಯರು ರಾಕ್ಷಸೋಕ್ತಿಯನ್ನು ಹ್ಯಾಗೆ ಹೇಳಿದರು. ಕೇಳಿ.

ಕಂ|| ಮುನಿವರರು ಪೇಳ್ವರುನ್ಮ |

ತ್ತನಗರ್ವೋದ್ಧತನನುಡಿಯು ರಾಕ್ಷಸಮೆನುತಂ ||

ಜನಿಪುದದರಿಂದೆ ವೈರಂ |

ಜಿಸುಕದೆ ಲಕ್ಷ್ಮಿಯನು ಕೆಡಿಪುದವನೀತಲದೊಳ್ ||

ಮತ್ತು— ಖ್ಯಾತಿಯನೀಯುತೆ ಲಕ್ಷ್ಮಿಯ |

ನೈತರುವೊಲ್ಮಾಡಿ ಸಕಲ ಮಂಗಳಕೆಲ್ಲಂ ||

ಮಾತೆಯೆನಿಸುತ್ತೆ ಮೆರೆವಾ |

ಮಾತೆ ದೈವಕಸೂನೃತವೆನುತ್ತೆ ಪೇಳ್ವರ್ ಮುನಿಗಳ್ ||

ಸುಮಂ—ಈ ಕುವರನ ಸ್ವಭಾವವಾದರೆ ಪಾವನವಾದದ್ದು. ಈತನು ವಾಲ್ಮೀಕಿಗಳ ಶಿಷ್ಯನಲ್ಲವೆ, ಆದ್ದರಿಂದ ಯೋಗ್ಯವಾಗಿ ಹೇಳುವನು.

ಲವ—ಎಲೈ ಚಂದ್ರಕೇತುವೆ ತಂದೆಯ ಪರಾಕ್ರಮಾತಿಶಯದಲ್ಲಿಯೂ ನಿನಗೆ ಕೋಪವೆಂದು ಹೇಳಿದೆಯಷ್ಟೆ, ಆದರೆ ನಾನೊಂದನ್ನು ಕೇಳುವೆನು. ಕ್ಷಾತ್ರಧರ್ಮಗಳೇನು ಒಬ್ಬನಲ್ಲೇ ನೇಮಿಸಲ್ಪಟ್ಟಿರುವವೋ ಏನು ? ಹೇಳಬೇಕು.

ಸುಮಂ—ಎಲೈ ಸುಕುಮಾರನೆ ಪೂಜ್ಯನಾದ ರಾಮಭದ್ರನ ಪ್ರತಾಪವನ್ನು

ಕಂ॥ ಸೈನಿಕರಗೆಲ್ದಮಾತ್ರಕೆ ।
ನಾನೇ ರಣವೀರನೆಂದು ಬಗೆದೈ ನಿಜದಿಂ ॥
ಭೂಸುತನಹ ಜಮದಗ್ನಿಯ ।
ಸೂನುವಗೆಲ್ದವನ ಮಾತು ನಿನಗೇತಕೆ ಪೇಳ್ ॥

ಲವ—(ನಗೆಯಿಂದ ಕೂಡಿ) ಭಲ.

ಕಂ॥ ಬಾಯಲಿ ವಿಪ್ರರ್ ಬಲ್ಲಿದ ।
ರಾಯುಧಮಂ ಪಿಡಿದ ವಿಪ್ರನಾ ಭೃಗುರಾಮಂ ॥
ಆಯತಿಸುತನಂ ಗೆಲ್ದಾ ।
ರಾಯಂಗೇಂ ಖ್ಯಾತಿಬಂದುದೋ ನಾನರಿಯೆಂ ॥

ಚಂದ್ರ—(ಕೋಪೋದ್ರೇಕದಿಂದ ಕೂಡಿ)

ಕಂ॥ ಅವನಿಪನೆಣಸೆನಾರಣ ।
ಕೋವಿದನಹ ಪರಶುರಾಮನಂ ತಿಳಿಯಂ ಲೋ ॥
ಕಾವಳಿಗಭಯಮನಿತ್ತಿಹ ।
ರಾವಣಮರ್ದನನ ಪಿತನ ಸಚ್ಚರಿತೆಯುಮಂ ॥

*ಲವ—ರಘುಪತಿಯ ಚರಿತ್ರೆಯನ್ನು ಮಹಿಮೆಯನ್ನು ಯಾರುತಾನೆ ತಿಳಿಯರು. ಆದರೆ ಸ್ವಲ್ಪ ಆಡತಕ್ಕ ವಿಷಯವುಂಟು. ಆಹ ಆಡಕೂಡದು. (ಶಾಂತಂ)

---

* ರಾಗ ॥

ಅರಸಲುಕೊಡದು ಹಿರಿಯರದೋಷವ। ನೆಡೆಗಳಕಿರಿಯರಾದವರಂತಿರಲಿದುತಾ ನರಸಲು॥೧॥ಸುಂದರಸ್ತ್ರೀಯನು। ಕೊಂದೊಡುಕೀರ್ತಿಯ। ಪೊಂದಿದವರುಮಹಾ ಪುರುಷರಲ್ಲೇನಾ ॥೨॥ ಖರನಸಂಗರದೊಳೆ। ಗೆರಡುಮೂರಡಿಯ್ಯಹಿಂಜರಿದವರು ಲೋಕೋತ್ತರರವರು ॥೩॥ ವಾಲಿವಧೆಯಗೈದ ಜಾಲವನೆ

ಚಂದ್ರ—ಎಲೋ ಧೂರ್ತನೆ ಮಿತಿಮೀರಿ ತಂದೆಯನ್ನು ಕೂಡ ಆಡುವೆಯ.

ಸಾಕು ಸಾಕು ಸುಮ್ಮನಿರು.

ಲವ—ಓಹೋ ಈತನು ನನ್ನಲ್ಲಿ ಅತಿಕೋಪಿಯಾದನು. ಒಳ್ಳೇದು. ನಾವಿಬ್ಬರೂ ಯುದ್ಧರಂಗಕ್ಕಿಳಿಯೋಣ.

( ಎಂದೆಲ್ಲರೂ ಹೊರಟುಹೋಗುವರು. )

ಐದನೆಯ ಅಂಕ ಮುಗಿದುದು.



# ಆರನೆಯ ಅಂಕ.



(ಅನಂತರ ವಿದ್ಯಾಧರ ವಿದ್ಯಾಧರಿಯರು ಪ್ರವೇಶಿಸುವರು.)

ವಿದ್ಯಾಧರ—ಆಹಾ ಸೂರ್ಯವಂಶಸ್ಥರಾದ ಈ ಕುಮಾರರ ಪರಾಕ್ರಮವು ದೇವಾಸುರರ ಪರಾಕ್ರಮವನ್ನು ಮೀರುವುದು ಎಲಾ ಪ್ರಿಯೆ ನೋಡು *

ವಿದ್ಯಾಧರಿ—ಓ ಪ್ರಿಯನೆ ಇದೇನಿದು ಅಕಾಲದಲ್ಲಿ ಅಂಬರವೆಲ್ಲಾ ಮಿಂಚು ಗಳಿಂದ ಹೊಳೆಯುತ್ತಿದೆ.

ವಿದ್ಯಾಧರ—(ನೋಡಿ) ನಿಜ ಇದೇನಾಗಿದ್ದೀತು (ಸ್ವಲ್ಪ ಯೋಚಿಸಿ) ತಿಳಿ ಯಿತು ತಿಳಿಯಿತು. ಇದು ಚಂದ್ರಕೇತು ಪ್ರಯೋಗಿಸಿದ ಆಗ್ನೇ ಯಾಸ್ತ್ರಪ್ರಭಾವವು, ಓಹೋ ಅದರ ಅಗ್ನಿಜ್ವಾಲೆಯು ಇತ್ತಲೂ ಮುತ್ತಿಕೊಂಡಿತ್ತು. ಇನ್ನೇನುಗತಿ? ನನ್ನ ಪ್ರಿಯಳನ್ನು ಅಂಗದಲ್ಲಿ ಅನಚಿಕೊಂಡು ದೂರ ಹೊರಟುಹೋಗುವೆನು. (ಎಂದು ಪ್ರಿಯ ಳನ್ನು ಎತ್ತಿಕೊಂಡು ಮುಂದಕ್ಕೆ ಹೋಗುವನು)

ವಿದ್ಯಾಧರಿ—ಆಹ ಪ್ರಿಯನ ಅಮೃತದಂತಿರುವ ಅಂಗಸ್ಪರ್ಶದಿಂದ ಸಂತಾಪ ವನ್ನು ನೀಗಿದೆನು. (ಮೇಲೆ ನೋಡಿ) ಓ ಪ್ರಿಯನೆ ಇದೇನು ಅಂತ ರಿಕ್ಷದಲ್ಲಿ ಗುಡುಗು ಮಿಂಚು ಮೋಡಗಳು ಕವಿದುಕೊಂಡಿರುವವು.

---

* ರಾಗ ॥ ನೋಟು ॥

ಕರಕಂಕಣಝಣಝಣಿಸುತ್ತಿರೆಮಿಗೆ । ಕರೆಕರೆಯುತೆಸಿತಶರವರ್ಷವನು ।
ನಿರುಕಿಸಲರಿದೆನೆಮಾಡುವರಿದೊಸಂ । ಗರವನುಸುಕುಮಾರಕರಹಹ ॥ ೧ ॥
ಇವರಿಬ್ಬರಬಲುಬವರಕೆಮೆಚ್ಚುತದಿವಿಜರದುಂದುಭಿಮೊಳಗುತ್ತಿಡೆ । ನವನಂ

ವಿದ್ಯಾಧರ—ಎಲೆ ಪ್ರಿಯೆ ಇದು ಕುಮಾರಲವನು ಪ್ರಯೋಗಿಸಿದ ವಾರು

ಣಾಸ್ತ್ರಪ್ರಭಾವವು, ಆಹ ಈ ವಾರುಣಾಸ್ತ್ರದಿಂದುಂಟಾದ ಜಲ

ಧಾರಾಸಂಪಾತಗಳಿಂದ ಆಗ್ನೇಯಾಸ್ತ್ರವು ತಣ್ಣಗಾಯಿತು,

ವಿದ್ಯಾಧರಿ—ಇದು ನನಗೆ ಪ್ರಿಯವು.

ಕೈಯಲ್ಲಿ ಪಟ್ಟೆವಸ್ತ್ರದ ಸೆರಗನ್ನು ಬೀಸುತ್ತ ಮಧುರವಚನಗ

ಳಿಂದ ಯುದ್ಧವನ್ನು ಬೇಡಬೇಡವೆಂದು ಹೇಳುತ್ತ ಕುಮಾರರಮಧ್ಯ

ದಲ್ಲಿ ವಿಮಾನದಿಂದಿಳಿಯುವ ಈತನು ಯಾರು.

ವಿದ್ಯಾಧರ—(ನೋಡಿ) ಶಂಬೂಕವಧಾನಂತರ ಹಿಂತಿರುಗಿದ ರಘುಪತಿ.

ಕಂ|| ಕಿವಿದಾಗಲೊಡನಾರಾ |

ಘುವವಚನಂ ರಣವನುಳಿದನಾವಂ ಲವನಂ ||

ದವನತನಾದಂಲಕ್ಷ್ಮಣಿ|

ಕುವರರಸಂಗಮದೊಳರಸಿಗಾಗಲಿಕುಶಲಂ ||

(ಎಂದು ವಿದ್ಯಾಧರರು ಹೊರಟುಹೋಗುವರು)

(ಅನಂತರ ರಾಮನೂ ಲವನೂ ವಿನತನಾದ ಚಂದ್ರ

ಕೇತುವೂ ಕೂಡಬರುವರು)

ಚಂದ್ರ—(ಪುಷ್ಪಕದಿಂದಿಳಿದು) ಎಲೈ ತಂದೆಯೇ ಇದೋ ಕುಮಾರ ಚಂದ್ರ

ಕೇತುವು ನಮಸ್ಕರಿಸುವನು. (ಎಂದು ನಮಸ್ಕರಿಸುವನು)

ರಾಮ—ಕಂ|| ಬಾಮಗನೆ ಚಂದ್ರಕೇ |

ತು ಮಹಾಮನುಕುಲಚಂದ್ರ ಬೇಗನಾಲಿಂಗಿಸು ನ ||

ನ್ನೀ ಮನದದಾಹವಿಂಗಲಿ |

ಕೋಮಲವಹನಿನ್ನ ದೇಹಸಂಸ್ಪರ್ಶದಿಂದೀಗ ||

(ಎಂದು ಎತ್ತಿ ಬಿಗಿದಪ್ಪಿಕೊಂಡು ) ಎಲೈ ಕುಮಾರನೆ ನಿನಗೆ

ಕುಶಲವೆ ?

ಚಂದ್ರ—ಮಹಾವೀರನಾದ ಲವನು ನನಗೆ ದೊರಕಿದ್ದರಿಂದ ನಾನು ಕುಶಲವು
ಳ್ಳವನು. ನನ್ನನ್ನು ನೋಡಿದಂತೆ ಈ ವೀರಾಗ್ರೇಸರನನ್ನು ಕರು
ಣಾದೃಷ್ಟಿಯಿಂದ ನೋಡಬೇಕು.

ರಾಮ—(ಲವನನ್ನು ನೋಡಿ) ಎಲೈ ವತ್ಸ ಚಂದ್ರಕೇತುವೆ ದೈವಯೋಗ
ದಿಂದ ಮಹಾ ಪರಾಕ್ರಮಿಯಾದ ಪುತ್ರನನ್ನು ಪಡೆದೆ.

ಲವ—ಆಹ ಈ ಪುರುಷನನ್ನು ನೋಡಿದರೆ ಮಹಾನುಭಾವನಾಗಿರುವನು.

ಕಂ|| ಈತನನಾಂ ನೋಡೆ ವಿರೋ |
ಧಾತಿಶಯಂ ಪೋಗಿ ಭಕ್ತಿಪುಟ್ಟಿತು ಮನದೊಳ್ ||
ಈತೆರನದೇನೊ ಮೇಣೀ |
ಭೂತಲದೆ ಮಹಾತ್ಮರಿರವನು[illegible]ಲ್ಕರಿದೈ ||

ರಾಮ—ಇದೇನು! ಈತನನ್ನು ನೋಡಿದಮಾತ್ರಕ್ಕೆ ಸೀತಾ ವಿರಹದಿಂದುಂ
ಟಾದ ದುಃಖವೆಲ್ಲಾ ಹೋಗಿ ನನ್ನ ಮನಸ್ಸು ಸಂತೋಷಪಡುವುದು.
ಅಥವಾ ಸ್ನೇಹಕ್ಕೆ ನಿಮಿತ್ತ ಬೇಕೆಂಬ ಮಾತು ನಂಬತಕ್ಕದ್ದಲ್ಲ.
ಹಾಗೆಯೇ ಸರಿ.

ಕಂ|| ಸ್ನೇಹಗೊಳಿಸುವದು ಮನುಜರ |
ನಾಹಹ ಕಾರಣಮದೊಂದದಂತರ್ಗತಮೆಂ ||
ತೂಹಿಪುದು ಸೂರ್ಯನುದಯಿಸೆ |
ನೇಹಂ ಮಿಗೆ ಕಮಲಮಲರ್ವ ಕಾರಣಮೇನೈ||

ಲವ—ಎಲೈ ಚಂದ್ರಕೇತು ಇವರು ಯಾರು ?

ಚಂದ್ರ—ಪ್ರಿಯಮಿತ್ರನೆ! ಇವರಲ್ಲವೆ ನಮ್ಮ ತಂದೆಗಳು.

ಲವ—ನೀನು ನನ್ನನ್ನು ಪ್ರಿಯಮಿತ್ರನೆಂದು ಕರೆದದ್ದರಿಂದ ನನಗೂ ತಂದೆ
ಗಳೇ ಸರಿ. ಆದರೆ ನಿಮಗೆ ನಾಲ್ವರುಂಟಷ್ಟೆ? ಅವರಲ್ಲಿ ಇವರು
ಯಾರು ಹೇಳು.

ಚಂದ್ರ—ಇವರೇ ಹಿರಿಯ ತಂದೆಗಳೆಂದು ತಿಳಿ.

ಲವ—(ಉಲ್ಲಾಸದಿಂದ ಕೂಡಿ) ಆಹ! ರಘುಪತಿಯೆ! ಈದಿನ ಸುದಿನವು. ದೈವಯೋಗದಿಂದ ದೇವನನ್ನು ಕಂಡೆನು. (ವಿನಯಕೌತುಕಗಳಿಂದ ಕೂಡಿ) ರಘುಪತಿಯೆ ಇದೋ ವಾಲ್ಮೀಕಿಗಳ ಶಿಷ್ಯನಾದ ಲವನು ವಂದಿಸುವನು. (ಎಂದು ವಂದಿಸುವನು)

ರಾಮ—ಎಲೈ ಆಯುಷ್ಮಂತನೆ ? ಬಾ. ಬಾ. (ಎಂದು ಸ್ನೇಹದಿಂದ ಆಲಿಂಗಿಸಿಕೊಂಡು) ಎಲೈ ವತ್ಸನೆ! ಸಾಕು ಸಾಕು. ಅತಿ ವಿನಯವೇತಕ್ಕೆ ಅನೇಕವಾಗಿ ನನ್ನನ್ನು ದೃಢವಾಗಿ ಆಲಿಂಗಿಸಿಕೋ.

ಕಂ॥ ಅಲರಿದತಾವರೆಯೊಳಗಣ |
ದಳದಂತೆ ಮನೋಜ್ಞವಾದ ನಿನ್ನೀ ಸ್ಪರ್ಶಂ ॥
ಮಲಯಜದರಸವ ನೆದೆಯೊಳು |
ವಿಲೇಪನಂಗೈದತೆರದೊಳಾನಂದಿಪುದೈ ॥

ಲವ—(ತನ್ನಲ್ಲಿ ತಾನು) ಇಷ್ಟು ಪ್ರೀತಿಯುಳ್ಳವರ ಸಂಗಡ ಯುದ್ಧಮಾಡಿದ ನಾನು ಅಜ್ಞನಲ್ಲವೆ. ಎಲೌ ಪೂಜ್ಯರೆ ಬಾಲಕನ ಅಪರಾಧವನ್ನು ಕ್ಷಮಿಸಬೇಕು.

ರಾಮ—ಎಲೈ ಚಂದ್ರಕೇತುವೆ ಇವನು ಮಾಡಿದ ತಪ್ಪೇನು ?

ಚಂದ್ರ—ಅಶ್ವರಕ್ಷಕರು ಆಡಿದ ತಮ್ಮ ಪರಾಕ್ರಮವನ್ನು ಕೇಳಿ ಸೈರಿಸದೆ ತನ್ನ ಪರಾಕ್ರಮವನ್ನು ತೋರಿಸಿದನು.

ರಾಮ—ಅದೇತಾನೆ ಕ್ಷತ್ರಿಯನಿಗೆ ಅಲಂಕಾರವು.

ಚಂದ್ರ—ಎಲೈ ತಂದೆಯೆ ಈ ನನ್ನ ಪ್ರಿಯಮಿತ್ರನು ಜೃಂಭಕಾಸ್ತ್ರದಿಂದ ನಮ್ಮ ಸೈನ್ಯವನ್ನೆಲ್ಲಾ ನಿಶ್ಚೇಷ್ಟಿತರನ್ನಾಗಿ ಮಾಡಿರುವನು. ನೋಡಬೇಕು.

ರಾಮ—(ನೋಡಿ) ಎಲೈ ವತ್ಸನಾದ ಲವನೆ ಜೃಂಭಕಾಸ್ತ್ರವನ್ನು ಉಪಸಂಹಾರಮಾಡು.

ಲವ—ಅಪ್ಪಣೆಯಾದಂತಾಗಲಿ. (ಎಂದು ಅಸ್ತ್ರೋಪಸಂಹಾರವನ್ನು ಅಭಿನೈಸುವನು.)

ರಾಮ—ಎಲೈ ಚಂದ್ರಕೇತುವೆ ನೀನೇಹೋಗಿ ನಿಶ್ಚೇಷ್ಟಿತರಾಗಿ ಬಿದ್ದಿರುವ ಸೈನ್ಯವನ್ನು ಸಂತೈಸು.

ಚಂದ್ರ—ಆಜ್ಞೆಯಾದಂತಾಗಲಿ. (ಎಂದು ಹೋಗುವನು)

ರಾಮ—ಎಲೈ ವತ್ಸನೆ! ಈ ಮಹಾಸ್ತ್ರಗಳು ಕೃಶಾಶ್ವನ ದೆಸೆಯಿಂದ ವಿಶ್ವಾಮಿತ್ರರಿಗೆ ಸೇರಿದವು. ಅವರಿಂದ ನನಗೆಲಭಿಸಿದುವು. ಅವು ನಿನಗೆ ಲಭ್ಯವಾದ ಕ್ರಮವು ಹ್ಯಾಗೆ.

ಲವ—ಇವು ಹುಟ್ಟುವಾಗಲೆ ನಮ್ಮಿಬ್ಬರಲ್ಲಿ ಸೇರಿದವು.

ರಾಮ—ಇದು ಪುಣ್ಯಪ್ರಭಾವವೇ ಸರಿ. ಆದರೆ ನಿಮ್ಮಿಬ್ಬರಲ್ಲಿ ಅಂದರೇನು?

ಲವ—ಅವಳಿಮಕ್ಕಳು ನಾವು.

ರಾಮ—ಹಾಗಾದರೆ ಇನ್ನೊಬ್ಬನೆಲ್ಲಿ ?

ತೆರೆಯಲ್ಲಿ—ಎಲೈ ಭಾಂಡಾಯನ ಭಾಂಡಾಯನ ಆಯುಷ್ಮಂತನಾದ ಲವನಿಗೆ ರಘುಕುಲದ ನರೇಂದ್ರನೊಡನೆ ಯುದ್ಧನಡೆಯುವುದೆಂದು ಹೇಳದೆಯಲ್ಲಾ? ಇನ್ನು ಕ್ಷತ್ರಿಯಜಾತಿಯ ಪರಾಕ್ರಮವನ್ನು ನಿಲಿಸುವೆನು.

*ರಾಮ—(ನೋಡಿ) ಬಾಲನಿವನಾವನೋ ಹ[illegible]ನೀಲಾಭ್ರಂ ಧ್ವನಿಯೊಳೆನಗೆ ರೋಮಾಂಚವ [illegible] ಕದಂಬಕೆ। ನೀಲಾಭ್ರ ಗುಡುಗಿನಿಂದ [illegible]

ಲವ—ಈತನೆ ನಮ್ಮಣ್ಣನಾದ ಕುಶನು. ಭರತಾಶ್ರಮದಿಂದ ಬಂದನು.

ರಾಮ— (ಸಂತೋಷದಿಂದ ಕೂಡಿ) ಎಲೈ ವತ್ಸನೆ! ಆಯುಷ್ಮಂತನನ್ನು ಇತ್ತಿತ್ತ ಕರೆ.

ಲವ—ಆಗಲಿ. (ಎಂದು ಸ್ವಲ್ಪದೂರ ನಡೆದು ಕರೆತರುವನು)

---

* ರಾಗ॥ ತಾಳ॥

ಜಲಧರಶ್ಯಾಮನಿವನಾವಂ ॥ಪ॥ ಧ್ವನಿಮಾತ್ರದೆ ಮ। ತ್ತನು ರೋಮಾಂಚವ। ಅನುಗೊಳಿಸುವನಾಲಿಸೆ ॥ ೧ ॥

ಕುಶ–(ಪ್ರವೇಶಿಸಿ ಧನುಷ್ಟಂಕಾರವನ್ನು ಮಾಡಿ)

ಕಂ|| ಭುವನೈಕವೀರರೆನಿಸುವ |

ರವಿಕುಲದ ನರೇಂದ್ರರೊಡನೆ ಸಂಗರವಾಗಲ್ ||

ಪ್ರವಿಲಸದಸ್ತ್ರಜ್ವಾಲಾ |

ಕವಚಿತಗುಣವೆನಿಸಿದೆನ್ನ ಗುಣವಿದು ಧನ್ಯಂ ||

(ಕೋಪದಿಂದ ಬರುವನು)

ರಾಮ–(ನೋಡಿ) ಆಹ! ಈ ಕ್ಷತ್ರಿಯ ಪುತ್ರನನ್ನು ನೋಡಿದರೆ ತನ್ನ ದೃಷ್ಟಿಯಿಂದ ಜಗತ್ತನ್ನು ತೃಣೀಕರಿಸುವನು.

ಕುಶ–ಎಲೈ ಆಯುಷ್ಮಂತನೆ ಯುದ್ಧವೆಂದು ಕೇಳಿ ಬಂದೆನಲ್ಲಾ.

ಲವ–ಎಲೋ ಸ್ವಲ್ಪ ನಡೆಯಿತು. ಆರ್ಯನೆ ಗರ್ವವನ್ನುಬಿಟ್ಟು ಇಲ್ಲಿ ವಿನಯದಿಂದಿರಬೇಕು.

ಕುಶ–ಅದೇನುಕಾರಣ.

ಲವ–ಇದೋ ಪೂಜ್ಯನಾದ ರಘುಪತಿಯು.

ಕುಶ–(ಯೋಚಿಸಿ) ಓಹೋ ಜಗತ್ಪತಿಯಾದ ಆ ರಾಮಾಯಣ ಕಥಾನಾಯಕನೋ.

ಲವ–ಹೌದು.

ಕುಶ–ಹಾಗಾದರೆ ಈ ಮಹಾನುಭಾವನನ್ನು ಹ್ಯಾಗೆ ಉಪಚರಿಸಬೇಕೊ ಕಾಣೆನಲ್ಲ.

ಲವ–ಹ್ಯಾಗೇನು ತಂದೆಯನ್ನು ಕಂಡಂತೆ ಉಪಚರಿಸಬೇಕು.

ಕುಶ–ಅದು ಹ್ಯಾಗೆ.

ಲವ–ಲಕ್ಷ್ಮಣಪುತ್ರನಾದ ಚಂದ್ರಕೇತುವು ನಮಗೆ ಪ್ರಿಯಮಿತ್ರನು. ಆದ್ದರಿಂದ ಈ ರಾಜರ್ಷಿಯು ತಂದೆಯೇ ಸರಿ.

*ಕುಶ—(ರಾಮನನ್ನು ನೋಡಿ)

ಇದೋ ವಾಲ್ಮೀಕಿಗಳ ಶಿಷ್ಯನಾದ ಕುಶನು ನಮಸ್ಕರಿಸುವೆನು (ಎಂದು ನಮಸ್ಕರಿಸುವನು)

†ರಾಮ—ಬಾ ಆಯುಷ್ಮಂತನೇ ಬಾ (ಎಂದು ಆಲಿಂಗಿಸುವನು)

ಲವ—ತಂದೆಯೇ ಸೂರ್ಯನು ಲಲಾಟವನ್ನು ತಪಿಸುತ್ತಿರುವನು, ಆದ್ದರಿಂದ ಒಂದು ಮುಹೂರ್ತ ಈ ಮಾವಿನಮರದ ನೆರಳಲ್ಲಿ ಕುಳಿತುಕೊಳ್ಳ ಬೇಕು.

ರಾಮ—ಎಲೈ ವತ್ಸನೆ ಯುದ್ಧದಲ್ಲಿ ದಣಿದಿರುವಿರಿ. ಈ ಮಾವಿನಮರದ ನೆರಳಲ್ಲಿ ಕುಳಿತುಕೊಳ್ಳೋಣ ಬನ್ನಿ (ಎಂದು ಎಲ್ಲರೂ ಹೋಗಿ ಕುಳಿತುಕೊಳ್ಳುವರು)

ರಾಮ—(ಸ್ವಗತ) ಈ ಮಕ್ಕಳು ಎಷ್ಟು ವಿನೀತರಾಗಿದ್ದರೂ ನಡೆನುಡಿನೋಡಲಾದದ್ದೆಲ್ಲಾ ಸಾಮ್ರಾಜ್ಯಸೂಚಕವಾಗಿದೆ. (ಸೂಕ್ಷ್ಮದರ್ಶಿಯಾಗಿ) ಓಹೋ ಇವರಲ್ಲಿ ಅಧಿಕವಾಗಿ ರಘುಕುಲಕುಮಾರಚ್ಛಾಯೆಯು ತೋರುವುದು.

ಕಂ॥ ಪಾರಾವತಕಂಠನೊಲು ಶ |
ರೀರದ್ಯುತಿ ಹೆಗಲುಕಕುದಮೆನೆ ನೋಟಂಕಂ ॥

---

* ರಾಗ ॥ ತೋಡಿ ॥

ಶ್ರೀಕರವಿಖ್ಯಾತನಾಕೃತಿ ಆಹ। ಲೋಕೋತ್ತರಸೀಭೂಪತಿ। ಆಹ ॥ಪಲ್ಲ॥
ಲೋಕಮೆಲ್ಲದರೊಳಾ | ಲೋಕಿಸೆಸಕಲಗು। ಣಾಕರನೀಸೀತಾಪತಿ | ಅಹಾ
॥೧॥ರಾಯನೀತನುಕಥಾ॥ನಾಯಕನಾಗೆರಾ॥ಮಾಯಣಕವಿ ಕೃತಕೃತ್ಯನು॥೨॥

† ರಾಗ॥ ನಾರಾಯಣಿ॥

ಆನಂದರಸಭರಿತ। ನಾನಾದೆ। ಏನಿವನುಪರಿಭಾವಿಸಲುಮ। ತ್ಸೂನುವೋ ಪ್ರಾಣವೋ। ದೇಹಜನಿತಸ್ನೇಹಸಾರವೊ ॥ಅ॥ ಪೇಳುವದೇನಿನ್ನು। ಸೀತಾ ವಿರಹಜ್ವಾಲೆಪೋಗಿ। ತನುತಂಪಾದುದು। ಮೇಲೆಸುರಿದವೊಲಾಯ್ತೆನಗೆನವ॥ ಮೇಘವಾಹಅಮೃತವರ್ಷವೃನೀಲಮೇಘಶ್ಯಾಮನಾದೀ। ಬಾಲನಾಲಿಂಗಿ

ಶೀರವದೊಳ್ ಧ್ವನಿ ।

ಮೆರದಪುದಾರಯೆಮಂಗಳಮೃದಂಗನಿಸ್ವನಮೆಂಬೋಲ್ ॥

(ಚೆನ್ನಾಗಿ ನೋಡಿ) ಓಹೋ ಇವರಲ್ಲಿರುವದು ನನ್ನ ಹೋಲಿಕೆ ಮಾತ್ರವೇ ಅಲ್ಲ *

(ಆಲೋಚಿಸಿ) ವತ್ಸ ಲಕ್ಷ್ಮಣನು ದೇವಿಯನ್ನು ವಾಲ್ಮೀಕಿಗಳ ತಪೋವನದ ಬಳಿ ಬಿಟ್ಟಿರಬಹುದು. ಇವರಾಕೃತಿಯಂತು ಹೀಗಿರುವುದು. ಇದಲ್ಲದೆ ಜೃಂಭಕಾಸ್ತ್ರಗಳು ಸ್ವತಃ ಪ್ರಾಪ್ತವಾಗಿರುವುವು. ಇದೆಲ್ಲವನ್ನು ವಿಚಾರಿಸಿ ನೋಡಲು ಚಿತ್ರದರ್ಶನಪ್ರಸ್ತಾವದಲ್ಲಿ ಅಸ್ತ್ರಾಭಿಜ್ಞಾನವುಂಟಾಗಿದ್ದೀತು. ಉಪದೇಶಿಸಿದಲ್ಲದೆ ಮಹಾಸ್ತ್ರಗಳು ಪ್ರಾಪ್ತವಾಗತಕ್ಕದ್ದಲ್ಲವೆಂದು ಪೂರ್ವಿಕರಿಂದ ಕೇಳಿರುವೆನು. ಆದರೆ ಈ ಕುಮಾರರನ್ನು ನೋಡಿದುದರಿಂದುಂಟಾದ ಸಂತೋಷವು ಡೋಲಾಯಮಾನನಾದ ನನ್ನನ್ನು ಸಂದೇಹಪಡಿಸುವುದು. ಏನುಪಾಯದಿಂದ ಇವರನ್ನು ಕೇಳಿ ನನ್ನ ಮನದ ಕಳವಳವನ್ನು ಪರಿಹರಿಸಿಕೊಳ್ಳುವೆನು. (ಎಂದು ಕಂಬನಿಬಿಟ್ಟು ವ್ಯಸನ ಪಡುವನು)

†ಲವ—

---

* ರಾಗ ॥ ತೋಡಿ ॥

ಇರುವದುಜನಕಾತ್ಮಜೆಯಹೋಲಿಕೆಯು । ಪರಿಕಿಸಲೀಕುವರರೊಳಗೀಪರಿಯು ॥ ಪ ॥ ಒರೆವುದಿನ್ನೇನುತಾನದೆಚೆಲುವಿಕೆಯು ॥ ಅ ॥ ಆಮೊಗವಾಕಣ್ಗಳು ಆಮನೋಹಾರಿಣಿಯ ಕದಪುಗಳು । ಈ ಮಕ್ಕಳೊಳುದ್ಧಾಮವಾಗಿಹವು । ನಿರುಕಿಸಲೆನ್ನಿನಿಯಳ । ತಾವರೆಗೆಸಿರಿಯನು । ನೀಡುವನಗೆಮೊಗವೆಂದೆನೆ । ಮುರಳಿಕಣ್ಗೆಗೋಚರಿಸಿದಹಾಗೆ ॥ ೧ ॥

† ರಾಗ ॥ ಸುರಟಿ ॥ ಆದಿತಾಳ ॥

ಇದೇನಿದು ಮರುಗುತಿರುವೆ ಮನುಜೇಂದ್ರ । ವರಗುಣಸಾಂದ್ರ ಭಾಸ್ಕರ ಕುಲಚಂದ್ರ ॥ಪ॥ ಹೊಳೆವಮುಖೇಂದು ಕಳೆಗುಂದಿಹುದು ಅಳುವದೇತಕೆ

ರಾಮ—(ಸ್ವಗತಂ) ಇವರ ಮಾತನ್ನು ಕೇಳಿದರೆ ಸೀತಾತನಯರಲ್ಲವೆಂದು ತೋರುವುದು. ಹಾಗಿದ್ದ ಪಕ್ಷದಲ್ಲಿ ಕುಶನು ಸೀತೆಯನ್ನು ತನ್ನ ತಾಯಿ ಯೆಂದು ಹೇಳದೆ ಸೀತೆಯೆಂದು ಹ್ಯಾಗೆಹೇಳಿದನು.

ಎಲೆ ಹತಹೃದಯವೆ! ಇವರೇ ಸೀತಾತನಯರೆಂದು ತಿಳಿದು ಯಾ ತಕ್ಕೆ ಕಳವಳಿಸುವೆ. ಸಾಕು ಸಾಕು. ಸುಮ್ಮನಿರು.

(ಪ್ರಕಾಶಂ) ಎಲೈ ಮಕ್ಕಳಿರಾ ವಾಲ್ಮೀಕಿಗಳು ರಾಮಾಯಣವನ್ನು ಹೇಳಿರುವರೆಂದು ಕೇಳಿಬಲ್ಲೆ. ಅದರಲ್ಲಿ ಸ್ವಲ್ಪ ಹೇಳಿ. ಕೇಳಲಿಚ್ಛೈ ಸುವೆನು.

ಕುಶ—ಆಗಲಿ. ಆದರೆ ಬಾಲಕಾಂಡದಲ್ಲಿ ಇವೆರಡು ಶ್ಲೋಕಗಳು ನೆನಪಿನಲ್ಲಿ ಇರುವುವು. ಅದನ್ನು ಹೇಳುವೆನು.

ರಾಮ—ಅವನ್ನು ಹೇಳು.

ಕುಶ—ಶ್ಲೋ ॥ ಪ್ರಕೃತ್ಯೈವ ಪ್ರಿಯಾ ಸೀತಾ ।
ರಾಮಸ್ಯಾಸೀನ್ಮಹಾತ್ಮನಃ ॥
ಪ್ರಿಯಭಾವಸ್ಸ ತು ತಯಾ ।
ಸ ಗುಣೈ ರೇವ ವರ್ಧಿತಃ ॥೧॥
ತಥೈವ ರಾಮಸ್ಸೀತಾಯಾಃ ।
ಪ್ರಾಣೇಭ್ಯೋಪಿ ಪ್ರಿಯೋಭವತ್ ॥
ಹೃದಯಂ ತ್ವೇವ ಜಾನಾತಿ ।
ಪ್ರೀತಿಯೋಗಂ ಪರಸ್ಪರಂ ॥೨॥

---

* ರಾಗ॥ ಬೇಗಡೆ॥ ತಾಳ॥

ಏತಕೇಳ್ವೆಸೀತಾನಾಥನನಿಂ ॥ಪ॥ ಸೀತೆಯುಳಿದ ರಘುಜಾತಗೆ ಸುಖಮುಂಟೆ। ॥ಅ॥ಪ॥ ಭೂಮಿಜೆಯಂಬಿಟ್ಟು ಭೂರಿದುಃಖವಲೆ ಶ್ರೀ। ರಾಮಗೆ ಧಾತ್ರಿ ಯೊಳು। ಈಮರ್ಮನುಳಿ । ದೀಮಹಾರಾಜನ । ರಾಮಾಯಣವನೀ। ನೋಡಿದರವನವನೊಲು ॥೧॥

ರಾಮ-ಕಷ್ಟ. ಹೃದಯ ಮರ್ಮಚ್ಛೇದಕವಾದದ್ದನ್ನು ಕೇಳಿದೆನು. ಹಾ ದೇವಿ ಆಗ ನಾವು ಹೀಗಿದ್ದೆವಲ್ಲವೆ. † (ಒಂದುಮುಹೂರ್ತ ನಿಶ್ಚಲ ವಾಗಿದ್ದು ಕರುಣದಿಂದ ಕೂಡಿ)

ಕಂ॥ ಚಿಂತಿಸಿಚಿಂತಿಸಿ ಯಿದಿರೊಳು |

ನಿಂತಂತಿರ್ಪಿನಿಯಳೀಗಳುಂ ಸಂತೈಪಳ್॥

ಅಂತಹವಿರಹವಿಶೇಷಂ |

ತಾಂ ತೊಲಗಲ್ ಮನವ ದಹಿಸುತಿದೆ ಸಂತಾಪಂ ॥

ಕುಶ—ಇದು ಚಿತ್ರಕೂಟದಲ್ಲಿ ವನವಿಹಾರ ಮಾಡುವಾಗ ಸೀತಾದೇವಿಯನ್ನು ಕುರಿತು ರಘುಪತಿಯಾಡಿದ್ದು.

ಶ್ಲೋ॥ ತ್ವದರ್ಥಮಿವವಿನ್ಯಸ್ತಃ |

ಶಿಲಾಪಟ್ಟೋಯ ಮಗ್ರತಃ ॥

ಯಸ್ಯಾಯಮಗ್ರತಃ |

ಪುಷ್ಪೈಃ ಪ್ರವೃಷ್ಟ ಇವಕೇಸರಃ ॥

ರಾಮ—(ಲಜ್ಜಾಸ್ಮಿತಗಳಿಂದ ಕೂಡಿ) ಶಿಶುಜನವೆ ಕೇವಲ ಮುಗ್ಧತೆಯುಳ್ಳದ್ದು. ಇದರಮೇಲೆ ಇವರು ಅರಣ್ಯವಾಸಿಗಳು. ಹೇಳುವುದೇನು. ಹಾ ದೇವಿ ನಮ್ಮ ವಿಹಾರಪ್ರಸಂಗಕ್ಕೆ ಸಾಕ್ಷಿಯಾದ ಆ ಪ್ರದೇಶ ವನ್ನು ಸ್ಮರಿಸುವೆಯ. ಕಷ್ಟ, ಕಷ್ಟ.

ಕಂ॥ ಬೆಮರ್ವನಿಗಳಿಸಿಳಿತರೆ ಕುಂ |

ಕುಮಮುಜ್ವಲಿಸಿದ ಕಪೋಲದಿಂ ತೊಡವುಳಿದುಂ ॥

---

* ರಾಗ॥ ಪೂರ್ವಿಕಲ್ಯಾಣಿ॥ ಆದಿತಾಳ॥

ಹೀಗಿರ್ದವೆನಾ । ವಾಗಹ ಜಾನಕಿಯೆ॥ಪ॥ ನಾ । ನೆಲ್ಲಿಯುಮನೋನುರಾಗ। ವೆಲ್ಲಿಯುಸುಖಾನುಭೋಗ। ಎಲ್ಲಿಯುದುಃಖಸುಖಗಳೊಳೆರ। ಡಿಲ್ಲದಮನೋ ಭಾವ ॥ ೧॥ ಇಂತುನೇಹವುಳ್ಳಪ್ರಾಣ। ಕಾಂತೆಯನಾಂ ಕಾಂತಾರದಿ।

ರಮಣೀಯಮೆನಿಪ ಕರ್ಣದಿ |

ಸುಮನೋಹರವಾದ ನಿನ್ನ ಮುಖವಂ ಸ್ಮರಿಪೆಂ ||

ತೆರೆಯಲ್ಲಿ—ಪೂಜ್ಯರಾದ ವಸಿಷ್ಠ ವಾಲ್ಮೀಕಿಗಳು, ಕೌಸಲ್ಯಾ ದೇವಿಯರು ಅರುಂಧತೀಸಮೇತರಾಗಿ ಶಿಶುಗಳಿಗೆ ಉಂಟಾದಕಲಹವನ್ನು ಕೇಳಿ ಭೀತರಾಗಿ ಬರುವರು.

ರಾಮ—ಓಹೋ ಪೂಜ್ಯರಾದ ಅರುಂಧತಿ, ವಸಿಷ್ಠರು, ನನ್ನ ತಾಯಿ ಕೌಸಲ್ಯಾ ದೇವಿಯರು, ಮತ್ತು ಜನಕಮಹಾರಾಜನು ಇಲ್ಲಿಗೆ ಬರುವಂತಿದೆ. ಅವರನ್ನು ಹ್ಯಾಗೆತಾನೇ ನೋಡಲಿ. (ಎಂದು ಕರುಣದಿಂದ ಕೂಡಿ) ಆಹ ಜನಕನು ಇಲ್ಲಿಗೆ ಬರುವನೆಂದು ಕೇಳಿ ಮಂದಭಾಗ್ಯನಾದ ನಾನು ವಜ್ರದಿಂದ ತಾಡಿತನಾದೆನು.

ಕಂ|| ಧರಣಿಜೆಯಮದುವೆಗೈದಾ |

ದರಿಸಿದ ಜನಕಾವನೀಂದ್ರನೀಪರಿಯೊಳಲೊಳ್ ||

ಬರೆನೋಡಿಯು ವಿಾಹೃದಯಂ |

ಬಿರಿಯದು ಬಿರಿಯುವದದೆಂತು ರಾಮನಹೃದಯಂ ||

ತೆರೆಯಲ್ಲಿ—ಕಷ್ಟ. ಕಷ್ಟ.

ಕಂ|| ಮಡದಿಯವಿಯೋಗದುಃಖದಿ |

ಬಡವಾಗಿಹ ರಾಮನಿರವನೀಕ್ಷಿಸಿ ಜನಕಂ ||

ಪಡೆದಂ ಮೂರ್ಛೆಯನವನಂ |

ತಡೆಯಲ್ಕರಿದಾಗೆ ಮಾತೆಯರ್ ಮೈಮರೆತರ್ ||

ರಾಮ—ಅಯ್ಯೋ ಮುಂದೇನುಗತಿ.

ಕಂ|| ಜನಕರಘುಕ್ಷಿತಿನಾಥರ |

[illegible]

ರ್ಜನನಾದೆನ್ನಲ್ಲಿ ನಿಮಗದೇತಕೆ ಕರುಣಂ ॥

ಎಲ್ಲರನ್ನೂ ಸಂತೈಸುವೆನು. (ಎಂದು ಪೇಳುವನು) *

ಕುಶಲವರು-ಎಲೈ ತಾತನೆ ಇತ್ತಿತ್ತ ಬರಬೇಕು (ಕರುಣದಿಂದ ಆಕುಲನಾಗಿ ಹೊರಟು ಎಲ್ಲರೂ ಹೋಗುವರು).

ಆರನೆಯ ಅಂಕ ಮುಗಿದುದು



---

* ರಾಗ॥ ತಾಳ॥

ಹಾ ಮಾತೆ ಹಾ ತಾತ ಜನಕ । ಭೂಮೀಶರವಿವಂಶಜನಕ । ನೀವಿದೇನಿಂತು ಮೋಹವತಾಳ್ವರೆ ॥೧॥ ಕೋಮಲಾಂಗಿಯಾದ । ಸೀತಾಭಾಮಿನಿಯಬಿಟ್ಟು ದುಷ್ಟ ರಾಮನೊಳೇತಕ್ಕೆ । ನಿಮಗೀಪ್ರೇಮವು ॥೨॥

# ಏಳನೆಯ ಅಂಕ.

( ಬಳಿಕ ಲಕ್ಷ್ಮಣನ ಪ್ರವೇಶ )

ಲಕ್ಷ್ಮಣ—ಈಗ ಪೂಜ್ಯರಾದ ವಾಲ್ಮೀಕಿಗಳು ತಾವು ಮಾಡಿದ ನಾಟಕವನ್ನು ನೋಡುವದಕ್ಕಾಗಿ ನಮ್ಮನ್ನು ಬ್ರಹ್ಮ ಕ್ಷತ್ರ ಪುರಜನ ಪರಿಜನ ಸಮೇತ ಸಕಲಪ್ರಜೆಗಳನ್ನೂ ಕೂಡ ಕರೆದಿರುವರು. (ಸುತ್ತಲೂ ನೋಡಿ ) ಓಹೋ! ಆ ವಾಲ್ಮೀಕಿಗಳ ಪ್ರಭಾವದಿಂದ ದೇವದೈತ್ಯ ನಾಗನಾಯಕಸಮೇತ ಸಕಲ ಚರಾಚರ ಭೂತಂಗಳೆಲ್ಲವೂ ಸೇರಿ ರುವವು. ಮತ್ತು ಆರ್ಯನಾದ ಅಗ್ರಜನು ನಾಟಕಾವಲೋಕನಾರ್ಥ ವಾಗಿ ಗಂಗಾತೀರದಲ್ಲಿ ಸಮಾಜಸನ್ನಿವೇಶವನ್ನು ಮಾಡೆಂದು ಆಜ್ಞಾ ಪಿಸಿರುವನು. ತದಾಜ್ಞಾನುಸಾರವಾಗಿ ಸಭಾಸ್ಥಲವನ್ನು ಸಿದ್ಧಪಡಿ ಸಿರುವೆನು. ಇದೋ! ಆರ್ಯನು ಕೂಡ,

ಕಂ॥ ಧರೆಯಾಳಿಕೆಯಾಶ್ರಮವಾ ।
ಗಿರ್ತಿರ್ದುಂ ಕಷ್ಟವಹ ಮುನಿವ್ರತವಂ ತಾಂ ॥
ಧರಿಸಿರ್ಪಗ್ರಜನಿಲ್ಲಿಯೆ ।
ಇರುವಂ ವಾಲ್ಮೀಕಿಮುನಿಯೊಳಿಹಗೌರವದಿಂ ॥

( ಬಳಿಕ ರಾಮನ ಪ್ರವೇಶ)

ರಾಮ—ವತ್ಸ ಲಕ್ಷ್ಮಣನೆ ನಾಟಕವನ್ನು ನೋಡುವುದಕ್ಕೆ ಕರೆಯಲ್ಪಟ್ಟವ ರೆಲ್ಲರೂ ಬಂದಿರುವರೋ.

ಲಕ್ಷ್ಮಣ—ಆರ್ಯನೆ ಎಲ್ಲರೂ ಬಂದಿರುವರು.

ರಾಮ—ಕುಶಲವರನ್ನು ಚಂದ್ರಕೇತುವು ಕುಳ್ಳಿರುವ ಸ್ಥಲದಲ್ಲಿ ಕುಳ್ಳಿರಿಸು

ಲಕ್ಷ್ಮಣ—ಅಪ್ಪಣೆ. ತಾವು ರಾಜಾಸನದಲ್ಲಿ ಕುಳಿತುಕೊಳ್ಳಬೇಕು (ರಾಮನು ಕುಳಿತುಕೊಳ್ಳುವನು)

ಲಕ್ಷ್ಮಣ—ಎಲೈ ಸೂತ್ರಧಾರನೆ ಇನ್ನು ನಿನ್ನ ಪ್ರಸ್ತಾವನೆಯನ್ನುಪಕ್ರಮಿಸು ಬಾ.

ಸೂತ್ರಧಾರ— (ಪ್ರವೇಶಿಸಿ) ಪೂಜ್ಯರಾದ ಮತ್ತು ಸತ್ಯವಾದಿಗಳಾದ ವಾಲ್ಮೀಕಿಗಳು ಸಕಲವಾದ ಸಚರಾಚರ ಜಗತ್ತಿಗೆ ಹೀಗೆ ಆಜ್ಞಾಪಿಸುವರು. ನಾವು ಜ್ಞಾನದೃಷ್ಟಿಯಿಂದ ನೋಡಿ ಕರುಣಾದ್ಭುತರಸಗಳಿಂದ ಕೂಡಿರುವ ಪಾವನವಾದದ್ದೊಂದು ನಾಟಕವನ್ನು ರಚಿಸಿರುವೆವು. ಅದನ್ನು ಕಾರ್ಯಗೌರವದಿಂದ ಅವಧರಿಸಬೇಕೆಂದು,

ರಾಮ—ಆಹ ಮಹರ್ಷಿಗಳು ಅರಿಯದ ವಿಷಯವಾವುದುಂಟು. ಅವರ ವಾಕ್ಯಗಳು ಅಮೃತರಸಗಳು. ಆಜ್ಞೆಗಳು ಅಸಾಧಾರಣಗಳು. ಅದಕ್ಕೆ ಸಂದೇಹವೇನು.

ಸೂತ್ರ—ಕಂ॥ ತರಣಿಕುಲದರಸನುಳಿದಾ।
ಧರಣಿಜೆ ಬನದಲ್ಲಿ ತಾಂ ಪ್ರಸವವೇದನೆಯಂ॥
ಪರಿಹರಿಸಲಾರದಕಟಾ।
ಸುರನದಿಯೊಳು ದೇಹವಂ ಸಮರ್ಪಿಪಳೀಗಳ್॥

(ಎಂದು ಹೋಗುವನು)

(ಬಳಿಕ ಗಂಗಾತೀರ—ಸೀತಾಪ್ರವೇಶ) *

---

* ರಾಗ॥ ತಾಳ॥

ಹಾ ಆರ್ಯಪುತ್ರ। ಹಾವತ್ಸಲಕ್ಷ್ಮಣ॥ಪ॥ ಈ ಕಾಂತಾರದೋಳೇಕೆನ್ನ ಮನೇ। ಕಾಕಿನೀಮಾಡಿದೆ। ಹಾ ಕರುಣಾಳುವೆ ॥ಅ॥ ಪ್ರಸವವೇದನೆಯನ್ನೈ। ರಿಸಲಾರೆನುನಾಂ। ಮುಸುಕುವವಿದೊಘಾತುಕಮೃಗಗಳು ಹಾ ॥೧॥ ಮಂದಭಾಗ್ಯೆಯನಾ। ನೆಂದೇಂನಿಮ್ಮನು। ಇಂದೀಗಂಗಾನದಿಯೊಳುಬಿಳ್ವೆಂ॥

ರಾಮ—ಹಾ ದೇವಿ ಹಾ ದೇವಿ ವತ್ಸ ಲಕ್ಷ್ಮಣ ನೋಡು ನೋಡು.

ಲಕ್ಷ್ಮಣ—ಆರ್ಯನೆ ಇದೇತಕ್ಕೆ ಧೈರ್ಯಗುಂದುವೆ ಇದು ನಾಟಕವಲ್ಲವೆ.

*ರಾಮ—ಹಾ ವತ್ಸ ಲಕ್ಷ್ಮಣನೆ ಸೈರಿಸಲಾರೆನು. ನನ್ನನ್ನು ಹಿಡಿದುಕೊ.

(ಎಂದು ಲಕ್ಷ್ಮಣನಮೇಲೆ ಮಲಗಿಕೊಳ್ಳುವನು)

(ಬಳಿಕ ಪೃಥ್ವಿಭಾಗೀರಥಿಯರು ಅವಳಮಕ್ಕಳುಸಮೇತ
ಸೀತೆಯನ್ನು ಹಿಡಿದು ಜಲಮಧ್ಯದಲ್ಲಿ ಪ್ರವೇಶ)

ಪೃಥ್ವಿಭಾಗೀರಥಿಯರು—ಎಲೆ ದೇವಿ ವೈದೇಹಿಯೆ ಸಂತೈಸಿಕೊ. ಎಲೆ ಮಂಗಳಾಂಗಿ ಜಲಮಧ್ಯದಲ್ಲಿ ಮಕ್ಕಳನ್ನು ಹೆತ್ತು ದೈವಯೋಗದಿಂದ ಬದುಕಿದೆಯು.

ಸೀತೆ—(ಸಂತೈಸಿಕೊಂಡು) ದೈವಯೋಗದಿಂದ ಮಕ್ಕಳನ್ನು ಹೆತ್ತೆನು. ಹಾ ಆರ್ಯಪುತ್ರನೆ (ಎಂದು ಮೂರ್ಛಿಸುವಳು.)

ಲಕ್ಷ್ಮಣ—(ಪಾದಗಳಮೇಲೆ ಬಿದ್ದು) ಆರ್ಯನೆ ದೈವಯೋಗದಿಂದ ವರ್ಧಿಸುವರಾದೆವು. ಇನ್ನು ರಘುವಂಶವು ಮಂಗಳಮಯಗಳಾದ ಅಂಕುರಗಳನ್ನು ಪಡೆದುದು (ನೋಡಿ) ಹಾ ಆರ್ಯನೆ ಚೇತರಿಸುವನಾಗು (ಎಂದು ವಸ್ತ್ರದಿಂದ ಬೀಸುವನು.)

ಪೃಥ್ವಿ—ಎಲೆ ವತ್ಸೆ ಸಂತೈಸಿಕೊ.

ಸೀತೆ—(ಸಂತೈಸಿಕೊಂಡು) ಎಲಾ ಪೂಜ್ಯಳೆ ನೀನು ಯಾರು, ಈಕೆಯಾರು.

ಪೃಥ್ವಿ—ಎಲೆ ವತ್ಸೆ ಈಕೆಯು ನಿಮ್ಮ ಮಾವನ ಕುಲದೇವತೆಯಾದ ಗಂಗಾದೇವಿಯು.

---

* ರಾಗ ||

ಹಾಮಹೀಜೆ ವೈದೇಹಿಯೆ । ಕೋಮಲಾಂಗಿ ಹಾಹಾಪ್ರಿಯೆ ॥ಪ॥ ದೇವಿಹಾ ರಾಮನ । ಕೈವಿಡಿದುದಕೆನಿನ। ಗೀವಿಧಿಯು ಬಂದುದೇನೆ। ಹಾಪಾವನಾಂಗಿ ಚಂದಾನನೆ ॥೧॥

ಸೀತೆ—ಎಲೌ ಪೂಜ್ಯಳೆ ನಿನಗೆ ವಂದಿಸುವೆನು.

ಭಾಗೀರಥಿ—ಎಲೆ ವತ್ಸೆ ನಿನ್ನ ಸಚ್ಚರಿತ್ರೆಗೆ ತಕ್ಕ ಫಲವನ್ನು ಹೊಂದು.

ಲಕ್ಷ್ಮಣ—ಅನುಗೃಹೀತರಾದೆವು.

ಗಂಗೆ—ಎಲೌ ವತ್ಸೆ ಈಕೆಯು ನಿನ್ನನ್ನು ಹೆತ್ತ ಭೂದೇವಿಯಲ್ಲವೆ.

ಸೀತೆ—ಹಾ ಜನನಿ ಇಂಥಾ ಅವಸ್ಥೆಯಲ್ಲಿ ನನ್ನನ್ನು ನೋಡಿದೆಯ.

ಭೂದೇವಿ—ಬಾ ವತ್ಸೆ ಬಾ. (ಎಂದು ಆಲಿಂಗಿಸಿಕೊಂಡು ಮೂರ್ಛಿಸುವರು)

ಗಂಗೆ—ಎಲೈ ವತ್ಸೆ ವೈದೇಹಿಯೆ ಎಲೌ ಪೂಜ್ಯಳಾದ ಭೂದೇವಿಯೆ ಸಂತೈಸಿಕೊಳ್ಳಿ ಸಂತೈಸಿಕೊಳ್ಳಿ.

ಭೂಮಿ—ಎಲೌ ಪೂಜ್ಯಳೆ ಸೀತೆಯನ್ನು ಹೆತ್ತ ಒಡಲನ್ನು ಹ್ಯಾಗೆ ಸಂತೈಸಿಕೊಳ್ಳಲಿ, ಹೇಳು. ಮಗಳಿಗೆ ಆಗ ರಾಕ್ಷಸರ ಮಧ್ಯದಲ್ಲಿದ್ದ ಕಷ್ಟವೊಂದು. ಈಗ ಪತಿಯು ತ್ಯಾಗಮಾಡಿದ ಕಷ್ಟವೊಂದು. ಹೀಗಿರುವಾಗ ಹ್ಯಾಗೆ ಸಹಿಸಲಿ.

ಗಂಗೆ—ಎಲೌ ಭಾಗೀರಥಿಯೆ ನೀನು ಹೇಳಿದ್ದು ನಿಜ. ಯಾರಿದ್ದರೇನು? ಮಗಳಿಗೆ ಬಂದ ಕಷ್ಟವನ್ನು ಯಾರೂ ಪರಿಹರಿಸಲಿಲ್ಲ. ಕೈಹಿಡಿದ ಪತಿಯೇ ಸತಿಯನ್ನು ದೂರುಮಾಡಿದಮೇಲೆ ಇನ್ನೇನು ಹೇಳತಕ್ಕದ್ದು.

ಸೀತೆ—ಹಾ ಆರ್ಯಪುತ್ರನೆ.

ಪೃಥ್ವಿ—ಅವನುಯಾರು ನಿನಗೆ ಆರ್ಯಪುತ್ರನು.

ಸೀತೆ—(ಲಜ್ಜೆಯಿಂದ ಕೂಡಿ)ತಾಯಾದವಳು ಹ್ಯಾಗಾದರೂ ಹೇಳಬಹುದು.

ರಾಮ—ಮಾತೆ ಭೂಮಿದೇವಿಯೆ ನೀನು ಹೇಳಿದ್ದು ಸಹಜ. ನಾನು ಆರ್ಯಪುತ್ರನಾಗಿದ್ದಲ್ಲಿ ಸೀತಾ ವಿಷಯದಲ್ಲಿ ಹಾಗಿದ್ದು ಹೀಗೆ ಮಾಡುತ್ತಿದ್ದೆನೆ.

ಗಂಗೆ—ಎಲೌ ಪೂಜ್ಯಳಾದ ಭೂಮಿದೇವಿಯೆ ಲೋಕಮಾತೆಯಾದ ನೀನು

ಳು ಇಕ್ಷ್ವಾಕುಕುಲಜರಿಗೆ ಲೋಕಮೆಚ್ಚುವಂತೆ ನಡೆಯುವುದೇ

ಕುಲಕ್ರಮವಾಗತವು. ವತ್ಸನಾದ ರಾಮಭದ್ರನುತಾನೆ ಏನುಮಾ

ಡಿಯಾನು. ಲೋಕಾಪವಾದವೆಂಬುವದು ಕಷ್ಟ. ಸರ್ವಪ್ರಯತ್ನದಿಂದ

ಲೂ ಮನುಷ್ಯನು ಲೋಕಾಪವಾದಕ್ಕೆ ಸಿಕ್ಕದಂತೆ ಬಾಳಬೇಕಲ್ಲವೆ.

ಇದೋ ನಿನಗೆ ಸಮಸ್ಕಾರ.

ಲಕ್ಷ್ಮಣ—ಎಲೌ ಗಂಗಾದೇವಿ ಎಲ್ಲವನ್ನೂ ತಿಳಿದ ಪರದೇವತೆಯೇ ನೀನು.

ನಿನಗೆ ತಿಳಿಯದ ವಿಷಯವ್ಯಾವದುಂಟು.

ರಾಮ—ತಾಯಿ ಭಾಗೀರಥಿಯೆ ನೀನು ನಮ್ಮ ಕುಲೋದ್ಧಾರಿಣಿಯಲ್ಲವೆ ?

ಇನ್ನು ಹೇಳತಕ್ಕದ್ದೇನು.

ಪೃಥ್ವಿ—ಎಲೌ ಗಂಗೆ ನಿನಗೆ ನಾನು ಯಾವಾಗಲೂ ಪ್ರಸನ್ನೆಯಾಗಿಯೇ

ಇರುವೆನು. ಆದರೆ ಮಗಳ ಕಷ್ಟವನ್ನು ನೋಡಿ ಸೈರಿಸಲಾರೆನು.

ಸೀತಾವಿಷಯದಲ್ಲಿ ರಾಮಭದ್ರನಿಗೆ ಇರುವ ಪ್ರೇಮವನ್ನೂ ನಾನು

ತಿಳಿಯದವಳುಬೇರೆಯಲ್ಲ.

ಕಂ॥ ನಿಜವೀ ಲೋಕವಮೆಚ್ಚಿಸೆ ।

ಸುಜನೆಯುಮೆಂದರಿದು ವತ್ಸೆಯಂ ವಿಧಿವಶದಿಂ ॥

ತ್ಯಜಿಸುತ್ತತಿಕಷ್ಟದೆತಾಂ ।

ಪ್ರಜೆಮಾಡಿದಪುಣ್ಯದಿಂದೆ ಬದುಕಿಹನಾತಂ ॥

ರಾಮ—ಗುರುಜನಗಳಿಗೆ ಹ್ಯಾಗಾದರೂ ಪುತ್ರರಲ್ಲಿ ದಯವಿಲ್ಲವೆ.

ಸೀತೆ—(ರೋದಿಸುತ್ತಾ ಕೈಜೋಡಿಸಿಕೊಂಡು) *

---

* ರಾಗ ॥ ಮಾಂಜಿ ॥ ತಾಳ ॥

ಸಾಕುಸಾಕು । ಲೋಕದಬಾಳು । ಮನ್ಮಾತೆ ॥ಪ॥ ಸ್ವೀಕರಿಸಿಕೊನೀನು ॥ಅ॥ ಕುಂದುಬಾರ । ದಂದದಿನಡೆ । ಕೊಂಡರುಜನರು ಲೋಕದಿ । ಹಿಂದುಮುಂದು ನೋಡದಕಟ । ನಿಂದಿಸುವರುಹಾ ॥ ೧ ॥ ಹಿಂದೆರಾಕ್ಷಸನ ಮಂದಿರಾಂತ

ರಾಮ—ಇನ್ನೇನುತಾನೇ ಹೇಳ್ಳಾಳು.

ಭೂಮಿದೇವಿ—ಎಲೆ ಮಗಳೆ ಸ್ತನ್ಯತ್ಯಾಗದ ವರಿಗೂ ಮಕ್ಕಳನ್ನು ಸಂರಕ್ಷಿಸುವಳಾಗು. ಆಮೇಲೆ ನಿನ್ನ ಮನಸ್ಸಿಗೆ ಬಂದಂತೆ ಮಾಡುವೆಯಂತೆ ನಡೆ. ರಸಾತಳಕ್ಕೆ ಹೋಗೋಣ.

ಗಂಗಾ—ಹಾಗೆಯೇ ಸರಿ. (ಎಂದೆಲ್ಲರೂ ಹೋಗುವರು)

* ರಾಮ—(ಮೂರ್ಛಿಸುವನು).

ಲಕ್ಷ್ಮಣ—(ದುಃಖದಿಂದ) ಎಲಾ ಪೂಜ್ಯರಾದ ವಾಲ್ಮೀಕಿಗಳೆ ಇದೇಯೊ ನಿಮ್ಮ ನಾಟಕಕ್ಕೆಪ್ರಯೋಜನ.

ತೆರೆಯಲ್ಲಿ—ಎಲೈ ನಿಮ್ಮ ವಾದ್ಯಗಳ ಕಲಕಲವೆಲ್ಲಾ ನಿಲ್ಲಲಿ. ಎಲೈ ಸಕಲ ಸಭಾಸದರೆ ವಾಲ್ಮೀಕಿಗಳು ಅನುಜ್ಞೆಗೈದ ಆಶ್ಚರ್ಯವನ್ನು ಈಗ ನೋಡುವರಾಗಿ.

ಲಕ್ಷ್ಮಣ—ಆಹ ಇದೇನು.

ಕಂ॥ ಕಲಕಿತುಕಡೆದೋಲ್ ಗಂಗಾ ।
ಜಲಮಂಬರದಲ್ಲಿ ದೇವಮುನಿಗಳ್ ನೆರೆದರ್ ॥
ಛಲೆಗಂಗಾಪೃಥ್ವಿಯರಿಂ ।
ಸಲಿಲದಿತಾನೆದ್ದು ಬರ್ಪಳಾರ್ಯೆಯೆ ಈಗಳ್ ॥

ತೆರೆಯಲ್ಲಿ—ಎಲಾ ಪೂಜ್ಯಳಾದ ಅರುಂಧತಿಯೆ ನಾವು ಗಂಗಾಪೃಥ್ವಿಯರು. ಇದೋ ಪುಣ್ಯಚರಿತೆಯಾದ ಸೀತಾದೇವಿಯನ್ನು ನಿನ್ನಡಿಗೆ ಸಮರ್ಪಿಸಿದೆವು.

---

* ರಾಗ ॥ ಪೂರ್ವಿಕಲ್ಯಾಣಿ ॥ ಆದಿ.

ಇನ್ನೆಂತುಬಾಳ್ವೆ । ಇನಿಯಳನುಡಿದುನಾಂ ॥ಪ॥ ವರದಂಡಕಾವನ । ವಾಸಪ್ರಿಯಾಸಖಿ । ತೊರದೆನ್ನೊಳೆನ್ನೊಳಾಸೆಯ । ತೆರಳ್ವೆಯಸುಮುಖಿ ॥೧॥ ಹಾ ಕಾಂತೆಪೊಂದೆನೀಂ । ಲೋಕಾಂತರವನುನಾ । ನೇಕಾಕಿಯಾದೆ । ಲೋಕ

ಲಕ್ಷ್ಮಣ-ಆಹ ಆಶ್ಚರ್ಯ ಆಶ್ಚರ್ಯ ಆರ್ಯನೆ ನೋಡುನೋಡು. ಅಯ್ಯೋ ಆರ್ಯನು ಇನ್ನೂ ಮೂರ್ಛೆತಿಳಿಯದಿರುವನು.

(ಬಳಿಕ ಪೃಥ್ವೀ ಭಾಗೀರಥೀ ಸೀತಾ ಅರುಂಧತಿಯರು ಪ್ರವೇಶಿಸುವರು).

ಅರುಂಧತಿ—ಬೇಗ ನಿನ್ನ ಹಸ್ತಸ್ಪರ್ಶದಿಂದ ರಾಮಭದ್ರನನ್ನು ಸಂತೈಸು ಸಂತೈಸು. ಲಜ್ಜೆಯನ್ನು ಬಿಡು. ಇದೋ ನಿನ್ನ ಆರ್ಯಪುತ್ರನು ಮೂರ್ಛೆಯನ್ನು ಹೊಂದಿರುವನು.

ಸೀತೆ--( ರಾಮನನ್ನು ಮುಟ್ಟಿ) ಆರ್ಯಪುತ್ರನೆ ಸಂತೈಸಿಕೊ.

ರಾಮ—(ಸಂತೈಸಿಕೊಂಡು ಸಂತೋಷದಿಂದ) ಆಹಾ ನನ್ನ ಪ್ರಾಣಪ್ರಿಯಳು ಇಲ್ಲೇಇರುವಳು. ಓಹೋ ಪೂಜ್ಯಳಾದ ಅರುಂಧತಿಯೂ ಇರುವಳು ಈ ಪೂಜ್ಯೆಯರ್ಯಾರೋ ಕಾಣೆ. ಜನಗಳು ಇರುವರು.

ಅರುಂಧತಿ—ಎಲೈ ವತ್ಸನೆ ಈಕೆಯು ಭಗೀರಥನ ಗೃಹದೇವತೆಯಾದ ಪ್ರಸನ್ನ ಗಂಗಾದೇವಿಯು.

ಗಂಗಾ—ಎಲೈ ಜಗತ್ಪತಿಯಾದ ರಾಮಭದ್ರನೆ ಚಿತ್ರದರ್ಶನ ಕಾಲದಲ್ಲಿ ಸೀತಾವಿಷಯದಲ್ಲಿ ಕ್ಷೇಮಚಿಂತಕಳಾಗೆಂದು ಹೇಳಿದ್ದೆಯಷ್ಟೆ. ಅದರಂತೆ ಈಕೆಯನ್ನು ಕಾಪಾಡಿದೆನು. ಇನ್ನು ನಾನು ಋಣಮುಕ್ತೆಯು. ಈಕೆ ನಿಮ್ಮ ಅತ್ತೆಯಾದ ಭೂಮಿದೇವಿಯು.

ಭೂದೇವಿ—ಎಲೈ ಆಯುಷ್ಮಂತನೆ ಸೀತೆಯನ್ನು ತ್ಯಜಿಸುವಕಾಲದಲ್ಲಿ ಹೇಳಿದಂತೆ ನಾನು ಈಕೆಯನ್ನು ಕಾಪಾಡಿ ವತ್ಸನ ವಚನವನ್ನು ನೆರವೇರಿಸಿದೆನು.

ರಾಮ—ಎಲೈ ಪೂಜ್ಯೆಯರೆ ಅಪರಾಧಿಯಾದ ನನ್ನಲ್ಲಿ ನೀವು ಹಾಗೆ ಅನುಗ್ರಹಿಸಿದಿರಿ.

* ವಾಲ್ಮೀಕಿ—ಎಲಾ ಪುರಜನನಿವಾಸಿಗಳೇ ಕೇಳಿರಿ.

* ಎಲ್ಲರು—

ವಾಲ್ಮೀಕಿ-ಕಂ॥ ಧರಣಿಪತಿ ರಾಮಭದ್ರನೆ ।

ಹರಿಸದಿ ಸೀನಿನ್ನ ಧರ್ಮಚಾರಿಣಿಯಾದೀ ॥

ಧರಣಿಜೆಯೊಡಗೂಡುತ್ತಂ ।

ನೆರವೇರಿಸು ನೆಗಳುವಶ್ವಮೇಧಾಧ್ವರವಂ ॥

ರಾಮ—ಪೂಜ್ಯರೇ ತಮ್ಮ ಅಪ್ಪಣೆಯಾದಂತೆ ನಡೆಯುವೆನು.

ಅರುಂಧತಿ—ಎಲೈ ಪೂಜ್ಯರಾದ ವಾಲ್ಮೀಕಿಗಳೇ ಸೀತಾಗರ್ಭಸಂಭವರಾದ ಕುಶಲವರನ್ನು ರಾಮಭದ್ರನಿಗೆ ಸಮರ್ಪಿಸುವರಾಗಿ.

ವಾಲ್ಮೀಕಿ—(ಕುಶಲವರಿಗೆ ರಾಮನನ್ನು ತೋರಿಸಿ) ಎಲೈ ವತ್ಸರಾದ ಕುಶಲವರೆ ಈತನೇ ನಿಮ್ಮ ತಂದೆಯಾದ ರಘುಪತಿಯು. ಈತನು ನಿಮ್ಮ ಚಿಕ್ಕಪ್ಪನಾದ ಲಕ್ಷ್ಮಣನು. ಈತನು ನಿಮಗೆ ಮಾತಾಮಹನಾದ ಜನಕನು.

---

* ರಾಗ॥ ಕರಹರಪ್ರಿಯ॥ ರೂಪಕ.

ಘಡಘಡದೇಶಪುರನಿವಾಸಜನರೆಕೇಳಿರೆ । ನುಡಿದುದನೀವು ಕೇಳಿರೈ । ಸಂದೇಹವನೀಡಾಡಿರೈ ॥ ಅ॥ ಪ॥ ಕ್ಷಿತಿತನೂಜೆಪರಮಪತಿ। ವ್ರತೆಸುಶೀಲೆಸತ್ಯವೆಂದು। ಕ್ಷಿತಿಯುಗಂಗೆಈಶ್ವರರು । ಕೈಯೆತ್ತುತಿದೋ ಸಾರ್ವರು ॥೧॥ ಅಂದುಯಜ್ಞೇಶ್ವರನರ । ಬಿಂದುಭವಮುಖಾಮರರ್ಕಳೆಂದು। ಇಂದುರೈಸಾಸೀತೆಯು। ಸುಶೀಲೆಯುಂದುಸರ್ವರು ॥೨॥ ದೇವಯಾಗಜಾತೆಸೀತೆ । ಪಾವನಾಂಗಿಯನ್ನುನಿಮ್ಮ। ಭಾವವೇಸುಪೇಳಿರೈ । ಸತ್ಯಾತ್ಮರಾಗಿ ಬಾಳಿರೈ ॥೩॥

* ॥ ರಾಗ ॥

ಜಯಜಯಮಹಿತೆ ಮಹೀಸುತೆ ॥ ಪ॥ ಮಹೀಸುತೆಮಹೀಸುತೆ । ಮಹಾಜನಶ್ಲಾಘಿತನಿಜಚರಿತ್ರೆ ॥ ಅ॥ ಕ್ಷಿತಿಗಂಗಾಸನ್ನುತಸುಚರಿತೆಜಯ। ಪತಿಹಿತೆ । ಪ

ಕುಶಲವರು—ಹಾ! ತಂದೆ ಹಾ! ಜನನಿ ಹಾ! ಮಾತಾಮಹನೆ ಇದೋ ನಿಮ್ಮ
ಗಳಿಗೆ ವಂದಿಸುವೆನು. (ಎಂದೆಲ್ಲರಿಗೂ ವಂದಿಸುವರು)

ರಾಮ—(ಮಕ್ಕಳನ್ನು ಆಲಿಂಗಿಸಿಕೊಂಡು)

ಕಂ|| ವೈರಿ ಗಜಾಂಕುಶ ಕುಶಬಾ |
ಸಾರಸ ಸಖಕುಲಲತಾಸುಪಲ್ಲವ ಲವ ಬಾ ||
ಸೇರುತ ಸಮವಾಗಿಂದು ಕು |
ಮಾರರೆ ನೀವೊಪ್ಪುತೆನ್ನ ಸಂತೋಷಿಸಿರೈ ||

ಸೀತಾ—ಬಾ ವತ್ಸಕುಶಲನೆ! ಬಾ. ಬಾವತ್ಸಲವನೆ! ಬಾ. ಜನ್ಮಾಂತರ ಗತೆ
ಯಾದ ಜನನಿಯನ್ನು ಆಲಿಂಗಿಸಿಕೊಳ್ಳುವರಾಗಿರಿ.

ಕುಶಲವರು—(ತಾಯಿಯನ್ನು ಆಲಿಂಗಿಸಿಕೊಂಡು) ಈಗಲೀಗ ನಾವು ಧನ್ಯ
ರಾದೆವು.

ಸೀತಾ—ಎಲೌ ಪೂಜ್ಯರಾದ ವಾಲ್ಮೀಕಿಗಳೆ ನಿಮಗೆ ವಂದಿಸುವೆನು.

ವಾಲ್ಮೀಕಿ—ಎಲೌ ವತ್ಸೆ! ಪತಿ ಪುತ್ರರೊಡನೆ ಬಹುಕಾಲ ಬದುಕು.

ರಾಮ—ಪೂಜ್ಯರೆ ತಮ್ಮ ಅಪ್ಪಣೆಯಾದರೆ ಅಯೋಧ್ಯೆಗೆ ಹೋಗಿಬರು
ವೆನು. (ಎಂದು ಪತ್ನಿ ಪುತ್ರರೊಡನೆ ನಮಸ್ಕರಿಸುವನು)

ವಾಲ್ಮೀಕಿ—ವತ್ಸ! ರಾಮಭದ್ರನೆ! ನಿನ್ನ ಕೋರಿಕೆಯಲ್ಲಾ ನೆರವೇರಲಿ.
(ಮುಂದೆನೋಡಿ) ಓಹೋ ಲವಣಾಸುರನನ್ನು ಜೈಸಿದ ಮಧುರಾ
ಪತಿಯಾದ ಶತ್ರುಘ್ನನು ಬಂದನು.

ಲಕ್ಷ್ಮಣ—ಕಲ್ಯಾಣದಮೇಲೆ ಕಲ್ಯಾಣವುಂಟಾಯಿತು.

ರಾಮ—ಈಗನಾನು ಪೂರ್ಣಮನೋರಥ [illegible]ನಾದೆನು.

ವಾಲ್ಮೀಕಿ—ಎಲೈ ರಾಮಭದ್ರನೆ! ನಿನಗೇನು ಪ್ರಿಯವನ್ನುಂಟುಮಾಡಲಿ
ಹೇಳು.

ರಾಮ—ಎಲೈ ಪೂಜ್ಯರೆ! ಇದಕ್ಕಿಂತಲೂ ಇನ್ನೇನು ಪ್ರಿಯವುಂಟು. ತಮ್ಮ ಅನುಗ್ರಹದಿಂದ ಎಲ್ಲಾ ವಿಷಯಗಳಲ್ಲಿಯೂ ನಾನು ಪೂರ್ಣ ಮನೋರಥನು. ಆದರೆ ಇದು ತಮ್ಮ ಕೃಪೆಯಿಂದುಂಟಾಗಲಿ.

॥ ಭರತವಾಕ್ಯಂ ॥

ಕಂ॥ ಈಕಥೆ ಪಾಪಂಗಳನು ನಿ ।
ರಾಕರಿಸಲಿ ಗಂಗೆಯಂತೆ ಸಲಹಲಿ ತಾಯೊಲ್ ॥
ಲೋಕದ ಬುಧರೊಪ್ಪಲಿ ವಾ ।
ಲ್ಮೀಕಿಯ ಭಾರತಿಯನೆಮ್ಮ ಪಾಲಿಕಲೀಶಂ ॥

(ಎಂದೆಲ್ಲರೂ ಹೋಗುವರು)

ಏಳನೆಯ ಅಂಕ ಮುಗಿದುದು.

ಉತ್ತರರಾಮಚರಿತ್ರೆ ಸಂಪೂರ್ಣಂ.

ವರಗುಣಯುತ ಚಾಮಮಹೀ ।
ಶ್ವರನಿಂ ದಾಜ್ಞಪ್ತನಾಗಿ ತಾಂ ಸಂಸ್ಕೃತ ದು ॥
ತ್ತರರಾಮಚರಿತ್ರಮನಿಳೆ ।
ಯರಿಯಲ್ ಬಸವಪ್ಪಶಾಸ್ತ್ರಿ ಕನ್ನಡಿಸಿರ್ಪಂ ॥

---

ರಾಗ॥ ಸುರುಟಿ॥ ಆದಿತಾಳ ॥

ಜಯಜಗದಾವನ ನಿಪುಣ ಶಿತಿಕಂಠ ॥ಪ॥ ಜಯಶಿತಿಕಂಠಸೇವಕಸ್ತೋತ್ಕಂಠ ॥ಅ॥ ಖಂಡಿತಕಾಲ॥ ಖಂಡಲಬಾಲ ಖಂಡದಲೀಲ । ಮೃಕಂಡುಜ ಪಾಲ ॥೧॥ ಪಾಲಯಚಾಮಭೂ । ಪಾಲಕನಸುಕಂ । ಪಾಲ್ಗಿರಿಜಾಲೋಲ।

KARNATAKA GRANTHAMALA

Series No. 55

ಕರ್ಣಾಟಕ

# ಉತ್ತರರಾಮಚರಿತ್ರ ನಾಟಕಂ

ಶ್ರೀಮನ್ಮಹಾರಾಜರವರ

ಆಸ್ಥಾನಕವಿಗಳಾಗಿದ್ದ

ಬಸವಪ್ಪಶಾಸ್ತ್ರಿಗಳಿಂದ

ವಿರಚಿಸಲ್ಪಟ್ಟುದು.



MYSORE:

THE G. T. A. PRINTING WORKS.

# ಪೀಠಿಕೆ.

---

ಶ್ರೀ|| ಬಸವಪ್ಪ ಶಾಸ್ತ್ರಿಗಳು ಶ್ರೀಮತ್ಕರ್ಣಾಟಕ ಭಾಷಾಭಿವೃದ್ಧಿ ಬದ್ಧಾದರರಾದ ಶ್ರೀ ಮಹಿಸೂರ ಸಂಸ್ಥಾನದ ಶ್ರೀಮನ್ಮಹಾರಾಜ ಶ್ರೀಚಾಮ ರಾಜವೊಡೆಯರ್ ಜಿ. ಸಿ. ಎಸ್. ಐ. ಯವರಿಂದ ಆಜ್ಞಪ್ತರಾಗಿ ನಾಟಕ ಗಳಲ್ಲಿ ಉತ್ತಮವಾಗಿಯೂ, ನೀತಿಬೋಧಕವಾಗಿಯೂ ಇರುವ ಭವ ಭೂತಿ ಮಹಾಕವಿ ಪ್ರಣೀತವಾದ "ಉತ್ತರರಾಮಚರಿತ್ರೆ" ಎಂಬ ನಾಟಕವನ್ನು ೪ ಗಂಟೆಗಳ ಕಾಲದಲ್ಲಿ ಆಡುವುದಕ್ಕೆ ಅನುಕೂಲವಾಗು ವಂತೆ ಕೆಲವು ವರ್ಣನಾಂಶವನ್ನು ಬಿಟ್ಟು ಸಂದರ್ಭಾನುಗುಣವಾದ ಹಾಡುಗ ಳಿಂದ ಪಂಡಿತಪಾಮರ ರಂಜಕವಾಗುವಂತೆ ಕರ್ಣಾಟಕ ಭಾಷೆಯಲ್ಲಿ ಸಂಕ್ಷೇಪವಾಗಿ ರಚಿಸಿದರು.

ಇವರು ಗತಿಸಿದ ೧೬ ವರುಷಗಳ ಮೇಲೆ ಈ ಗ್ರಂಥವನ್ನು ಅಚ್ಚು ಹಾಕಿಸಬೇಕೆಂದು ತೆಗೆದು ನೋಡುವಲ್ಲಿ ಅನೇಕ ಕಡೆಗಳಲ್ಲಿ ಶಿಥಿಲವಾಗಿತ್ತು. ಇವರಿಂದ ಮಾಡಲ್ಪಟ್ಟ ನಾಟಕಗಳೊಳಗೆ ಒಂದಾದ ಇದನ್ನು ಹೇಗಾದರೂ ಮಾಡಿ ಮುದ್ರಿಸಿ ಪ್ರಕಟಿಸಬೇಕೆಂಬ ಅನೇಕರ ಕೋರಿಕೆಯಂತೆ ಶ್ರೀಚಾಮ ರಾಜೇಂದ್ರ ಕರ್ಣಾಟಕ ನಾಟಕದ ಕಂಪನಿಗೆ ನಾಟಕಕ್ಕಾಗಿ ಬರೆದು ಕೊಟ್ಟಿದ್ದ ಪ್ರತಿಯನ್ನೂ, ನನ್ನಲ್ಲಿದ್ದ ಪ್ರತಿಯನ್ನೂ ಪರಿಶೀಲಿಸಿ ಮುದ್ರಣ ಮಾಡಿಸಿದೆನು.

ಮುದ್ರಣಗೊಳಿಸಿದ ನಂತರ ಈ ಪುಸ್ತಕವನ್ನು ಶ್ರೀಮನ್ಮಹಾರಾಜ ಕಾಲೇಜ್ ಕರ್ಣಾಟಕ ಪಂಡಿತರು ವೇ|| ಟಿ. ಆರ್. ಕರಿಬಸವಪ್ಪ ಶಾಸ್ತ್ರಿ

ಕೃತಜ್ಞನಾ
ಗಿರುತ್ತೇನೆ.

ಅಲ್ಲದೆ ಈ ಗ್ರಂಥವು ಪ್ರಚಾರದಲ್ಲಿ ಬರಬೇಕೆಂಬ ಆಸ್ಥೆಯಿಂದ ತಮ್ಮ ಗ್ರಂಥಮಾಲೆಯಲ್ಲಿ ಪ್ರಚಾರಪಡಿಸಲು ಅತ್ಯಂತ ಸಹಾಯಮಾಡಿದ ಮ|| ರಾ|| ಮೈಸೂರು ಗೌರ್ನಮೆಂಟ್ ಸೆಕ್ರಟರಿಗಳಾಗಿದ್ದ ಯಂ. ಶಾಮರಾವ್, ಯಂ. ಎ ಯವರಿಗೂ ಗ್ರಂಥಮಾಲಾ ಮ್ಯಾನೇಜರ್ ಮ||ರಾ|| ಬಾಪು ಸುಬ್ಬರಾವ್, ಬಿ.ಎ. ಯವರಿಗೂ ತುಂಬಾ ಕೃತಜ್ಞನಾಗಿರುತ್ತೇನೆ.

ಇನ್ನೇನಾದರೂ ಪ್ರಮಾದವಿದ್ದಲ್ಲಿ ಗುಣಜ್ಞರಾದ ವಿದ್ವಾಂಸರು ಕೃತಪಡಿಸಿದಲ್ಲಿ ಕೇವಲ ಕೃತಜ್ಞತೆಯಿಂದ ಮುಂದಣ ಮುದ್ರಣದಲ್ಲಿ ಪರಿಷ್ಕರಿಸಲಾಗುವುದು.

ಗ್ರಂಥಕಾರರ ಪುತ್ರ,
ಬಿ. ಮಹದೇವಶಾಸ್ತ್ರಿ.



| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ,, | ,, | ಸಂಗಾಜಲಮುಂ | ಗಂಗಾಜಲಮಂ |
| ,, | 16 | ಗಲು | ಗಲೂ |
| ,, | 22 | ದೊರೆನಿದಂದದಿನಾಂ | ಬೊಬ್ಬಿರಿದಂದದಿನಾಂ |
| 8 | 16 | ಜನಕಗುಂಮೇ್ | ಜನಕಗುಂ ಮೇಣ್ |
| ,, | 20 | ಬಾಂಧವಾದರಿಗಪ್ರಿಯಂ | ಬಾಂಧವಗಧಾರಿಗಪ್ರಿಯಂ |
| 9 | 3 | ಭಾತ್ಯಗಳು | ಭೃತ್ಯಗಳು |
| ,, | 21 | ಸತೆ | ಸೀತೆ |
| 10 | 3 | ಶಿಶುತನದಿಮೊಳೆವ | ಶಿಶುತನದಿಂ ಮೊಳೆವ |
| ,, | 15 | ನೊಪ್ಪಿಸಿದರಘು | ನೊಪ್ಪಿಸಿರಘು |
| 11 | 16 | ಗಾಸಿಯುವಿರೆನೀಂ | ಗಾಸಿಯುಮಿರೆನೀಂ |
| ,, | 17 | ವಾಸದಕರಗಿನಿಂ | ವಾಸದಪೆರಗಿನಿಂ |
| ,, | ,, | ಬಲನೆಯೊಯು | ಬಲನೆಯೊಳು |
| ,, | 18 | ಸ್ಮದೆ | ಸ್ಮೈದೆ |
| ,, | 25 | ಕೊರೆಯುತಸನೊಳವಿ | ಕೊರೆಯುತವೇನೋಕಿವಿ |
| 12 | 5 | ಬುದುರುವ | ಬುದುರುವ |
| ,, | 12 | ಗಾನಿಸುವ್ವದು | ಗಾಗಿಸುವ್ವದು |
| ,, | 23 | ದೆಲ್ಲವು | ದೆಲ್ಲವು |
| 13 | 9 | ತಾವ | ಕಾವ |
| 14 | 5 | ತವಿಸವದೆಸ್ನಂ | ತಪಿಸುವುದೆಸ್ನಂ |
| 15 | 16 | ಇದುವೆರಳ | ಇದುವೆರಳ |
| ,, | 21 | ವಿಕಾಸನ | ವಿಕಾಸನೆ |
| ,, | ,, | ಮೋಹನ | ಮೋಹನೆ |
| 17 | 8 | ಕರ್ನ | ಕೇಳ್ |
| ,, | 12 | ಪರಿಹರಿಸಿದೊಡಂ | ನೊಕ್ತರಿಸಿದೊಡಂ |
| 19 | 15 | ನೀನಂತಪ | ನೀನಂತಪ್ಪ |
| 19 | 18 | ಕೈವಿಡಿದುದು | ಕೈವಿಡಿದುದ |
| 20 | 24 | ಜನಮೆಚ್ಚಿಸ | ಜನವಮೆಚ್ಚಿಸ |
| 21 | 1 | ಎಲ್ಲಿದ್ದೆಯು | ಎಲ್ಲಿದ್ದೀಯು |
| 23 | 17 | ಕುರಿನೆಂಬದಕೆ | ಕರಿನೆಂಬುದಕೆ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ,, | ,, | ಭಿಸ್ಕಳಿವಬಡೆ | ಹಿಸ್ಕಳಿವಾಡೆ |
| ,, | 21 | ಪ್ರುಳೇ | ಪ್ರೊಳೇ |
| 24 | 7 | ಮುನಿವರೆ | ಮುನಿವಾರೆ |
| ,, | 11 | ಜರಾಚರಧಾರಿ | ಚರಾಚರಧಾರಿ |
| ,, | 13 | ರಾಗಿ | ರಾಗಿರಿ |
| ,, | 16 | ಅರಸು | ಅರಸು |
| ,, | 20 | ಬಸರು | ಬಸಿರು |
| 25 | 3 | ತಾಳಿಯುಡು | ತಾಂಗೆ |
| 28 | 3 | ವಿದ್ಯ | ವಿದ್ಯೆ |
| 31 | 7 | ಕುಂಭಿನಿ | ಕುಂಭಿಣಿ |
| ,, | 22 | ಕೊಳುವ | ಕೊಳಲುವ |
| 32 | 17 | ಪರಮೇಷ್ಟಿ | ಪರಮೇಷ್ಠಿ |
| ,, | 22 | ಸ್ವರದಿಂ | ಸ್ವರಸೀನದೆ |
| 33 | 13 | ಪ್ರಿಯಾಪರೋ | ಪ್ರಿಯಾವರೊ |
| ,, | 14 | ಪಾರಣಿ | ಧಾರಿಣಿ |
| 34 | 18 | ಸುಸುತಿಯಿಂದೆ | ಸುಸ್ಥಿತಿಯಿಂದೆ |
| 35 | 3 | ಪಾತ್ಸಲ್ಯವತಿ | ವಾತ್ಸಲ್ಯವತಿ |
| ,, | 12 | ಫಳಫಳ | ಫುಳಫುಳ |
| ,, | 19 | ಮಂಚಿಕೆ | ಮುಂಚಿಕೆ |
| 36 | 14 | ತಪಸೆ | ಕಮಸೆ |
| 37 | 8 | ವಾಲ್ಮೀಕಿ | ವಾಲ್ಮೀಕಿಯು |
| ,, | 17 | ಸೀತಾದೇವಿಯನ್ನು | ಸೀತಾದೇವಿಯನ್ನು ಕುರಿತು |
| 38 | 7 | ಸಟೆಸುಡುವ | ಸೆಳೆಸುಡುವ |
| 40 | 14 | ಬೆಳವಾದ | ಬಿಳಿದಾದ |
| 42 | 22 | ಮೋಹಸ್ವೈಸೆಲಾವಣ್ಯಲಹರಿ | ಮೋಹವಾಸ್ಯೆಸೆ ಲಾವಣ್ಯ ಲಹರಿ |
| 43 | 6 | ತ್ರಿವರ್ಣನಯನ | ತ್ರಿವರ್ಣನಿಯನ |
| ,, | 7 | ಕಂಡೊಡನೆ | ವೀಕ್ಷಿಸನೊಡನೆ |
| ,, | 22 | ಭ್ಯಾಸದೆ | ಭಾಸದಿ |
| 44 | 14 | ಮುದಕರಿಗಳಂತಂ | ಮುದಕರಿಗಳಂತ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ,, | 25 | ಮೌರ್ವೀಬಲೆ | ಮೌರ್ವೀಮೇಖಲೆ |
| ,, | 26 | ಪಳದ | ಪವಳದ |
| ,, | ,, | ದಕ್ಷತ | ದಕ್ಷಕ್ಕೆ |
| 66 | 13 | ಮಹಿಮಾತಿಶಯ | ಮಹಿಮತಿಶಯ |
| 67 | 8 | ಸಾಟಿಯಾಗಿದೆ | ಸಾಟಿಯಾಗಿರೇ |
| ,, | 13 | ಅಹಾ | ಹಾಹ |
| 67 | 21 | ಕರಕನು | ವರಕನು |
| ,, | 24 | ಸಾಕ್ಷತಿಯುಗು | ಸಾಕ್ಷತಿಯುಸು |
| 69 | 22 | ಬಸದಿಗೋರ | ಬಸದಿಘೋರ |
| ,, | 24 | ಘಸಣಿ | ಗಸಣಿ |
| 70 | 2 | ಗೈವದರೊಳ್ | ಗೆದವರೊಳ್ |
| ,, | 8 | ಶಾಪದೊಳಾದೊಡೆ | ಶಾಪದೊಳಾದೊಡಮದಂ ಕರಂ |
| ,, | 11 | ಮುನಿಗಳಾ | ಮಹಾನಿಗಳಾ |
| ,, | 12 | ಮನಗಿಂತುಟಪ್ಪ | ಮನಕ್ಕಿಂತುಟಪ್ಪು |
| ,, | 27 | ಪಾಕಿಂದ್ವಾಗ | ಪಕ್ವಾದ್ವಾಗ |
| 71 | 17 | ಲೋಕವಸೋರ್ವನೆ | ಲೋಕದೊಳೋರ್ವನೆ |
| 72 | 17 | ಹೂಂಕಾರವ | ಹುಂಕಾರವ |
| ,, | 22 | ನಕ್ಕುವ | ನಳಕುವ |
| 73 | 15 | ಜ್ಯೋತಿರುವನುಚಂದ್ರಶೇಖರ | ಜ್ಯೋತಿರುವನು ರಣಕೆಚಂದ್ರಶೇಖರ |
| 78 | 14 | ಕರಗುವದೀ | ಕರಗುವುದೀ |
| 79 | 8 | ಜನಿಸುವದಿನ್ನೆತ್ತಣಿಂದ | ಜನಿಸುವುದಿನೆತ್ತಣಿಂದ |
| 80 | 3 | ರಘುಸಿಹ್ಮರ | ರಘುಸಿಂಹ್ಮರ |
| ,, | 16 | ದುಃಖಿ ಪ | ದುಃಖಿಪ |
| 82 | 10 | ಸುಖಿಸುವ | ಸುಖಿಸುವು |
| 85 | 19 | ನೊಳಗುತ್ತಿದೆ | ನೊಳಗುತಿದೆ |
| 86 | 12 | ಕುವನರ | ಕುವರರ |
| 87 | 10 | ಸುಸಿಳರಿದ್ದ | ಸುಸಿರಲ್ಕರಿದ್ದ |
| 89 | 6 | ದಿಶೆ | ದಿಸೆ |
| 94 | 5 | ಶಿವಿರಸಿಯುಳೇಗಳುಂ | ಶಿವಿರಸಿಯುಳೇಗಳುಂ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 97 | 11 | ಗಿರಿತಿದುರ್ಗಂ | ಗಿರುತಿದುರ್ಗಂ |
| 98 | 13 | ತರುಣಿ | ತರಣಿ |
| 104 | 18 | ಇಂದುಭವ | ವಿಂದುಭವ |
| 105 | 18 | ಕಷ್ಟಪ್ಪನು | ಕಹು ಪ್ಪನು |
| ,, | 20 | ಮನೋರಥಫಲಾವುನಾದೆನು | ಮನೋರಥನಾದೆನು |
| 106 | 8 | ಪಾಲಿಕಲೀಲಂ | ಬಾಲಿಕಲೀಲಂ |
| ,, | 17 | ಸೇವಕನೋತ್ಕಂಠ | ಸೇವಕಜನೋತ್ಕಂಠ |
| ,, | ,, | ಖಂಡಿತಕಾಲ | ಖಂಡಿತಕಾಲಾ |
| ,, | ,, | ಕೋಂಡದಲೀಲ | ಕೋದಂಡದಲೀಲಾ |
| ,, | 18 | ಬಾಲಕನಮುಖಂ | ಬಾಲಕನಸುಖಂ |
| ,, | ,, | ಬಾಲಗಿರಿಜಾಲೋಲ | ಬಾಲಯು ಗಿರಿಜಾಲೋಲ |

೩೦—೧೩. ಪರಿಕಿಸಿನೋಳ್ಪುದ ಸರಿಲಿಯುಳ್ಳ ಕುರ್ಗಂ ಬುಸ್ಸುವುದಕ್ಕೆ ಬದಲಾಗಿ (ಕಂದಾರ್ಥ) ಪರಿಕಿಸಿದೊಡೆ ಲೋಕೋತ್ತರ ಪುರುಷರ ಮಾನಸವನಾವನದುಪಲ್ಲ ಕುರ್ಗಂ ಬುಂಬುವುದನ್ನು ಉಪಯೋಗಿಸಬೇಕು.

೪೯—೧೬. ರಾಗು—(ನೋಡಿ) ಈ ಬ್ರಾಕೆಟಿನ ಮುಂದೆ ಈ ಕೆಳಗಣ ಪದ್ಯವನ್ನು ಉಪಯೋಗಿಸಬೇಕು.

ಕಂ॥ ಬಾಲನಿವನಾವನೋ ಹರಿ ।
ನೀಲಾಭಂ ಧ್ವನಿಯೊಳೆನಗೆ ರೋಮಾಂಚನ ತಾ ॥
ಕೇಳಿಪನಾತ ಕದಂಬಕೆ ।
ನೀಲಾಭ್ರಂ ಗುಡುಗಿನಿಂದೆ ಮುಗುಳೇರಿಪವೋಲ್ ॥

